# ಭೂಮಿಕೆಯ ಅನುವಾದ

ಭಾರತೀಯ ಸಾಹಿತ್ಯಕ್ಷೇತ್ರದಲ್ಲಿ ವೇದಗಳ ಸ್ಥಾನಮಾನಗಳು ಹೆಚ್ಚಿನವೆನಿಸಿವೆ ಎಂಬಲ್ಲಿ ಯಾರಿಗೂ ಸಂಶಯವಿಲ್ಲ. ಅದಷ್ಟೇ ಅಲ್ಲದೆ, ವಿಶ್ವಸಾಹಿತ್ಯಕ್ಷೇತ್ರದಲ್ಲಿಯೇ ಅವುಗಳಿಗೆ ಹೆಚ್ಚಿನ ಮಹತ್ವವೂ ಅಸಾಧಾರಣವಾದ ಸ್ಥಾನವೂ ಇರುವುದಾಗಿಯೇ ಹೇಳಬೇಕು. ಈ ವೇದಗಳನ್ನು ಅಪೌರುಷೇಯವೆಂದು ಭಾರತೀಯರು ಜಗತ್ತಿಗೆ ಸಾರಿರುವರು. "ಸರ್ವವ್ಯಾಪಕನಾದ ಪರಮಾತ್ಮನ ನಿಟ್ಟುಸಿರೇ ಈ ವೇದಗಳು" ಎಂಬ ಆರ್ಯೋಕ್ತಿಯಿಂದ ಪರಮಾತ್ಮನಿಂದಲೇ ನೇರವಾಗಿ ಇವು ಹೊರಹೊಮ್ಮಿದವೆಂಬುದು ಸ್ಪಷ್ಟಪಡುತ್ತದೆ. ಆದ್ದರಿಂದ ಇವನ್ನು ದೇವಸಾಹಿತ್ಯವೆಂದೇ ಭಾವಿಸಲಾಗಿದೆ. ಆದಕ್ಕಾಗಿಯೇ ವೇದಭಾಷೆಯನ್ನು ದೇವಭಾಷೆ ಎಂದು ಕರೆಯಲಾಗಿದೆ. ಎಲ್ಲಾ ಭಾಷೆಗಳಿಗೂ ಆಶ್ರಯವಾಗಿರುವುದರಿಂದಲೂ, ಮಾಧುರ್ಯದಿಂದಲೂ ಅದಕ್ಕೆ ಆ ಹೆಸರು ಸಲ್ಲುತ್ತದೆ. ಇಷ್ಟು ಪವಿತ್ರವಾದ ವೇದಸಾಹಿತ್ಯದಲ್ಲಿ ಉಪನಿಷತ್ತುಗಳ ಸ್ಥಾನವನ್ನು ಎಷ್ಟು ಹೆಚ್ಚಿನದೆಂದು ತಿಳಿಸುವುದೇ ಕಷ್ಟವೆಂದು ವಿದ್ವಾಂಸರು ಭಾವಿಸಿದ್ದಾರೆ. ಈ ಉಪನಿಷತ್ತುಗಳಿಗೆ 'ವೇದಾಂತ' ಗಳೆಂಬ ಹೆಸರಿದೆ. ವೇದಗಳ ಕೊನೆಯ ಭಾಗವೆಂಬುದೇ ಈ ಪದದ ಅರ್ಥ. ವೇದಗಳ ಕೊನೆಯ ಭಾಗವನ್ನು ವಿಶದವಾಗಿ ತಿಳಿಸುವುದರಿಂದ ಉಪನಿಷತ್ತುಗಳಿಗೆ ಈ ಹೆಸರು ಬಂದಿದೆ. ಎಲ್ಲ ವೇದಗಳ ಮುಖ್ಯೋದ್ದೇಶವು ಪರಮಾತ್ಮನಲ್ಲಿಯೇ ಅಡಗಿದೆ. "ವೇದಗಳೆಲ್ಲದರಿಂದಲೂ ತಿಳಿಯಬಹುದಾದ ವಸ್ತುವೇ ನಾನು" ಎಂದು ಭಗವಂತನೇ ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾನೆ. ಇಂತಹ ಪರಮಾತ್ಮನ ಸ್ವರೂಪವನ್ನು ತಿಳಿಸುವ ವೇದಾಂತಗಳನ್ನು ಉಪನಿಷತ್ತೆಂದು ವ್ಯವಹರಿಸಲಾಗಿದೆ. 'ಉಪ–ಸಮೀಪದಲ್ಲಿ ನಿಷತ್–ನೆಲಸಿರುವುದು' ಎಂಬ ವ್ಯುತ್ಪತ್ತಿಯಿಂದ ಈ ಭಾಗಕ್ಕೆ ಪರಮಾತ್ಮನ ಸಮೀಪದಲ್ಲಿರುವಿಕೆ ಎಂದು ಅರ್ಥವಾಗುತ್ತದೆ. ಪರಮಾತ್ಮನ ಸಾಮೀಪ್ಯವೆಂದರೆ ಪರಮಾತ್ಮನನ್ನು ನೇರವಾಗಿ ತಿಳಿಸುವುದೆಂದರ್ಥ. ವೇದಗಳು ಬೇರೆ ವಿಷಯಗಳನ್ನು ಪ್ರಧಾನವಾಗಿ ವಿವರಿಸುತ್ತ ಪರಮಾತ್ಮನ ಬಗ್ಗೆ ಸ್ಪಷ್ಟವಾಗಿ ತಿಳಿಸದೇ ಇದ್ದರೂ ವೇದಾಂತಗಳು ಮೊದಲಿಂದ ಕೊನೆಯವರೆಗೂ ಪರಮಾತ್ಮನನ್ನೇ ಉದ್ದೇಶಿಸಿ ನೇರವಾಗಿ ಅವನ ಸ್ವರೂಪವನ್ನೂ ಅವನಿಗೂ ಮನುಷ್ಯನಿಗೂ ಇರುವ ಸಂಬಂಧವನ್ನೂ, ಹಾಗೆಯೇ ಅವನಿಗೂ ಪ್ರಪಂಚಕ್ಕೂ ಇರುವ ಸಂಬಂಧವನ್ನೂ ನಿರೂಪಿಸುತ್ತಿರುವುದರಿಂದ ಈ ಭಾಗಗಳನ್ನು ಉಪನಿಷತ್ತೆಂದು ಕರೆದದ್ದು ಯುಕ್ತವೆನಿಸುತ್ತದೆ.

ಈ ಉಪನಿಷತ್ತುಗಳು ದಿವ್ಯೋಪದೇಶದಿಂದ ಮಾನವನಿಗೆ ಅವನ ನಿಜಸ್ಥಿತಿಯನ್ನು ತಿಳಿಸಿ ಪರಮಾತ್ಮನಿಗೂ ಅವನಿಗೂ ಇರುವ ಬಾಂಧವ್ಯವನ್ನು ತೋರಿಸಿಕೊಡುವುದರಿಂದ ಅವನ್ನು ದರ್ಶನವೆಂದೂ ವ್ಯವಹರಿಸಲಾಗಿದೆ. ಈ ದರ್ಶನಗಳಲ್ಲಿ ಅಧ್ಯಾತ್ಮದರ್ಶನವೇ ಎಲ್ಲಕ್ಕೂ ಹೆಚ್ಚಿನದು. ಪ್ರಪಂಚದ ವಸ್ತುಗಳೆಲ್ಲವನ್ನು ಕಾಣುವುದಕ್ಕಿಂತಲೂ

ಆತ್ಮಸ್ವರೂಪವನ್ನು ಕಾಣುವುದೇ ಮಾನವನಿಗೆ ಸಂಸಾರಪಾಶದಿಂದ ಬಿಡುಗಡೆಗೆ ನೇರವಾದ ಉಪಾಯವೆಂದು ಉಪನಿಷತ್ತುಗಳು ತಿಳಿಸುತ್ತಿವೆ. ಆತ್ಮದರ್ಶನದಿಂದ ಸರ್ವದರ್ಶನವೂ ಆಗುವುದೆಂದು ಉಪನಿಷತ್ತು ಉದ್ಘೋಷಿಸಿದೆ. ಇದಕ್ಕೆ 'ಏಕವಿಜ್ಞಾನೇನ ಸರ್ವವಿಜ್ಞಾನ' ಶ್ರುತಿಯೆಂದು ಕರೆಯಲಾಗಿದೆ. ಆದ್ದರಿಂದಲೇ "ಎಲ್ಲ ವಿದ್ಯೆಗಳಿಗಿಂತಲೂ ಅಧ್ಯಾತ್ಮವಿದ್ಯೆಯೇ ಹೆಚ್ಚಿನದು" ಎಂದು ಭಗವಂತನು ಗೀತೆಯಲ್ಲಿ ಹೇಳಿದ್ದು ಅನ್ವರ್ಥವೆನಿಸಿದೆ. ಈ ಅಧ್ಯಾತ್ಮದರ್ಶನದಲ್ಲಿಯೂ ಉಪನಿಷತ್ಪ್ರಸ್ಥಾನ, ಗೀತಾಪ್ರಸ್ಥಾನ, ಸೂತ್ರಪ್ರಸ್ಥಾನ ಎಂದು ಮೂರುಬಗೆಯ ಪ್ರಸ್ಥಾನಗಳು ಪ್ರಸಿದ್ಧವೆನಿಸಿವೆ. ಶರೀರವೇ ತಾನೆಂದು ಅಭಿಮಾನಿಸಿ ಭೋಗದಲ್ಲಿಯೇ ನಿರತನಾಗಿರುವ ಜೀವನು ಆಗಾಗ್ಗೆ ಜುಗುಪ್ಸೆಪಡುತ್ತ ಗುರುವಿನ ಉಪದೇಶದಿಂದ ತನ್ನ ಪ್ರಕೃತಿಯನ್ನೇ ಬದಲಾಯಿಸಿಕೊಂಡು ಭೋಗವನ್ನು ಭಗವಂತನ ಪ್ರಸಾದವೆಂದು ಹಿತವಾಗಿಯೂ ಮಿತವಾಗಿಯೂ ಅನುಭವಿಸುತ್ತ ಯೋಗಮಾರ್ಗದಲ್ಲಿ ನಿರತನಾಗುವನು. ತನ್ನೊಳಗೆ ತನಗಾಗಿ ಗೋಪ್ಯವಾಗಿ ನೆಲಸಿರುವ ಪರಮಾತ್ಮನ ಸ್ವರೂಪವನ್ನು ತಿಳಿದು ಅವನನ್ನು ಒಳಗೂ ಹೊರಗೂ ನೆನೆಯುತ್ತ ಅವನು ನೀಡಿದ ಪ್ರಸಾದವನ್ನು ಭೋಗಿಸುತ್ತ ಅವನಿಗೆ ದಾಸನಾಗುವ ಜೀವನು ದೇಹೇಂದ್ರಿಯಗಳನ್ನು ಆ ಪರಮಾತ್ಮನ ಸೇವೆಗೆ ವಿನಿಯೋಗಿಸುತ್ತ ಹೃದಯದೊಳಗೆ ನೆಲಸಿರುವ ಪರಮಾತ್ಮನ ಕಡೆಗೆ ಪ್ರಯಾಣಮಾಡಲು ಉದ್ಯುಕ್ತನಾಗುವನು. ಹೀಗೆ ಅವನ ಗಮನವನ್ನು ಹೃದಯದ ಕಡೆಗೆ ತಿರುಗಿಸಿ ಅಲ್ಲಿಗೆ ಅವನ ಪ್ರಸ್ಥಾನ=ಪ್ರಯಾಣಕ್ಕೆ ಸಿದ್ಧಪಡಿಸಲು ಪ್ರಸ್ಥಾನಗಳು ಸಾಧನವೆನಿಸಿವೆ. ಈ ಮೂರು ಇಲ್ಲದೇಇದ್ದರೆ ಜೀವನು ಯಾವಾಗಲೂ ಇಂದ್ರಿಯಸುಖಗಳಲ್ಲಿಯೇ ಮೈಮರೆತು ಭೋಗಜೀವಿಯೇ ಆಗಿದ್ದು ಯೋಗಮಾರ್ಗವನ್ನೇ ಕೈಬಿಡುತ್ತಿದ್ದನು. ಭೋಗತ್ಯಾಗದಿಂದ ಯೋಗಾನಂದವನ್ನು ಮಾನವನು ಅನುಭವಿಸಲು ಸದವಕಾಶವನ್ನು ಕೊಡುತ್ತಿರುವುದರಿಂದ ಪ್ರಸ್ಥಾನತ್ರಯದ ಜ್ಞಾನವು ಅವನಿಗೆ ಅನಿವಾರ್ಯವೆನಿಸಿದೆ.

ಆದ್ದರಿಂದಲೇ ಶಂಕರಾಚಾರ್ಯರೇ ಮೊದಲಾದವರು ಈ ಮೂರು ಪ್ರಸ್ಥಾನಗಳಿಗೂ ಭಾಷ್ಯಗಳನ್ನು ಬರೆದು ಅವುಗಳಲ್ಲಿ ಅಡಗಿರುವ ತತ್ತ್ವವನ್ನು ಪ್ರಕಾಶಪಡಿಸಿರುವರು. ಈ ಮೂರರಲ್ಲಿ ಉಪನಿಷತ್ಪ್ರಸ್ಥಾನವೇ ಎಲ್ಲಕ್ಕೂ ಮೂಲವೆನಿಸಿದೆ. ಸೂತ್ರಪ್ರಸ್ಥಾನಕ್ಕೆ ಉಪನಿಷತ್ತುಗಳೇ ವಿಷಯವೆನಿಸಿವೆ. ಉಪನಿಷತ್ತುಗಳಲ್ಲಿ ಅಧಿಕಾರಿಗಳ ಯೋಗ್ಯತೆಗನುಗುಣವಾಗಿ ಉಪದೇಶವು ಬಂದಿರುವುದರಿಂದ ಅಲ್ಲಿ ಸಮನ್ವಯವೂ, ವಿರೋಧಪರಿಹಾರವೂ ಆವಶ್ಯಕವೆನಿಸಿವೆ. ಈ ಬಗೆಯ ವಿರೋಧವನ್ನು ಪರಿಹರಿಸಿ ಸಮನ್ವಯದ ಮೂಲಕ ಉಪನಿಷತ್ತುಗಳ ಅರ್ಥವನ್ನು ನಿರ್ಣಯಿಸಲು ಬೇಕಾದ ಯುಕ್ತಿಗಳನ್ನು ತಿಳಿಸಲಿಕ್ಕಾಗಿಯೇ ಬ್ರಹ್ಮಸೂತ್ರಗಳು ಹೊರಟಿವೆ. ಸೂತ್ರಗಳು 'ಲಕ್ಷಣ'ವೆನಿಸಿದರೆ, ಉಪನಿಷತ್ತುಗಳು ಅದರ ಸಮನ್ವಯಕ್ಕಾಗಿ ಉಪಯೋಗಿಸುವ ಉದಾಹರಣಗಳೆನಿಸುತ್ತವೆ. ಗೀತೆಯಂತೂ ನೇರವಾಗಿ ಭಗವಂತನ ಉಪದೇಶವೇ ಆಗಿದ್ದರೂ ಅದು ಮಹಾಭಾರತದಲ್ಲಿ ಸೇರಿ ಇತಿಹಾಸವೆನಿಸಿದ್ದರಿಂದ ಅದನ್ನು

ಪೌರುಷೇಯವೆಂದೇ ಭಾವಿಸಲಾಗಿದೆ. "ಉಪನಿಷತ್ತುಗಳು ಅಪೌರುಷೇಯ" ವೆಂಬುದಂತೂ ಎಲ್ಲರಿಗೂ ಸಮ್ಮತವೆನಿಸಿದೆ. ಆದ್ದರಿಂದ ಬ್ರಹ್ಮಸೂತ್ರಗಳಿಗಿಂತ ಗೀತೆಯೂ, ಗೀತೆಗಿಂತ ಉಪನಿಷತ್ತುಗಳೂ ಶ್ರೇಷ್ಠವೆಂದು ಅನುಭವಿಗಳು ಹೇಳುತ್ತಾರೆ. ಇದರಿಂದ ಆಧ್ಯಾತ್ಮದರ್ಶನದಲ್ಲಿ ಉಪನಿಷತ್ತುಗಳ ಸ್ಥಾನವೇ ಹೆಚ್ಚಿನದೆಂಬುದು ನಿರ್ವಿವಾದ. ಆದ್ದರಿಂದಲೇ ಆಧ್ಯಾತ್ಮದರ್ಶನವನ್ನು 'ವೇದಾಂತದರ್ಶನ' ವೆಂದು ವ್ಯವಹರಿಸಿದ್ದು ಯುಕ್ತವೆನಿಸಿದೆ. ಈ ವೇದಾಂತದರ್ಶನದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ ಮೊದಲಾದ ಪ್ರಭೇದಗಳಿದ್ದರೂ ಇವೆಲ್ಲಕ್ಕೂ ವೇದಾಂತವೆಂಬ ಹೆಸರು ಸಾಮಾನ್ಯವಾಗಿ ಅನ್ವಯಿಸುತ್ತದೆ. ಎಲ್ಲ ದರ್ಶನಗಳಿಗಿಂತಲೂ ವೇದಾಂತದರ್ಶನಕ್ಕೆ ಈ ಹೆಸರು ಅನ್ವರ್ಥವೆನಿಸಿದ್ದರಿಂದ ಉಪನಿಷತ್ತುಗಳು ಎಷ್ಟು ಶ್ರೇಷ್ಠವೆಂಬುದು ನಿರ್ಣಯವಾಗುತ್ತದೆ.

ಇಂತಹ ಉಪನಿಷತ್ತುಗಳು ಅನೇಕವಿವೆ; ಆದರೂ ಅವುಗಳಲ್ಲಿ ಎಲ್ಲರೂ ಒಪ್ಪಿರುವ ಕೆಲವು ಮಾತ್ರ ಪ್ರಸಿದ್ಧವೆನಿಸಿವೆ. ಅವುಗಳಲ್ಲಿ ಈಶ, ಕೇನ, ಕಠ, ಪ್ರಶ್ನ, ಮುಂಡಕ, ಮಾಂಡೂಕ್ಯ, ತೈತ್ತಿರೀಯ, ಐತರೇಯ, ಛಾಂದೋಗ್ಯ, ಬೃಹದಾರಣ್ಯಕ ಎಂದು ಹತ್ತು ಉಪನಿಷತ್ತುಗಳು ವಿಶ್ರುತವಾಗಿವೆ. ಶಂಕರಾಚಾರ್ಯರೇ ಮೊದಲಾದವರು ಈ ಹತ್ತನ್ನೇ ಅಂಗೀಕರಿಸಿರುವರು. ಆದರೂ ಅವರು ಈ ಶ್ವೇತಾಶ್ವತರೋಪನಿಷತ್ತನ್ನೂ ಸಹ ಅಂಗೀಕರಿಸಿದ್ದಾರೆ. ರಾಮಾನುಜಾಚಾರ್ಯರೂ ಸಹ ಅನೇಕ ಸ್ಥಳಗಳಲ್ಲಿ ಈ ಉಪನಿಷತ್ತಿನ ವಾಕ್ಯಗಳನ್ನು ಪ್ರಮಾಣವೆಂದು ಉದಾಹರಿಸಿರುವರು. ಆದ್ದರಿಂದ ಈ ಉಪನಿಷತ್ತು ಪ್ರಮಾಣವೆಂಬಲ್ಲಿ ಯಾರಿಗೂ ವಿರೋಧಕ್ಕೆ ಅವಕಾಶವಿಲ್ಲ. ಎಲ್ಲ ಉಪನಿಷತ್ತುಗಳೂ ಸಾಮಾನ್ಯವಾಗಿ ಪ್ರಮಾಣವೆನಿಸಿದ್ದರೂ ಶ್ವೇತಾಶ್ವತರೋಪನಿಷತ್ತು ಶೈವರಿಗೆ ಅತ್ಯಂತ ಆದರಣೀಯವೆನಿಸಿದೆ. ಇದರಲ್ಲಿ ಪರಮಾತ್ಮನನ್ನು ಶಿವನೆಂಬ ಹೆಸರಿನಿಂದಲೇ ನಿರ್ದೇಶಿಸಲಾಗಿದೆ. ಆದರೂ ಕೆಲವು ಕಡೆ 'ಶಿವ' ಎಂಬ ಪದಕ್ಕೆ ಬದಲಾಗಿ 'ದೇವ' ಎಂಬ ಪದವನ್ನು ಉಪಯೋಗಿಸಿರುವುದಾಗಿ ಶಾಂಕರಭಾಷ್ಯ ಮೊದಲಾದ ಕಡೆಗಳಲ್ಲಿ ಕಂಡುಬಂದಿದೆ. 'ಜ್ಞಾತ್ವಾ ಶಿವಂ' ಎಂಬಲ್ಲಿ 'ಜ್ಞಾತ್ವಾ ದೇವಂ' ಎಂದು ಹೇಳಿದೆ. ಆದರೂ "ಏಕೋ ಹಿ ರುದ್ರೋ ನ ದ್ವಿತೀಯಾಯ ತಸ್ಥೇ" ಎಂದೂ, "ಯದಾ ತಮಸ್ತನ್ನ ದಿವಾ ನ ರಾತ್ರಿರ್ನ ಸನ್ನ ಚಾಸಚ್ಛಿವ ಏವ ಕೇವಲಃ", "ವಿಶ್ವಾಧಿಕೋ ರುದ್ರೋ ಮಹರ್ಷಿಃ" ಎಂದು ಎಲ್ಲರಿಗೂ ಒಪ್ಪಿಗೆಯಾಗುವಂತಹ ವಾಕ್ಯಗಳು ಇಲ್ಲಿ ಕಂಡುಬಂದಿವೆ. ಈ ವಾಕ್ಯಗಳೇ ಶೈವಮತಕ್ಕೆ ಮೂಲಪ್ರಮಾಣವೆನಿಸಿವೆ. ಆದ್ದರಿಂದ ಈ ಉಪನಿಷತ್ತು ಶೈವರಿಗೆ ಅತ್ಯಂತೋಪಕಾರಕವೆನಿಸಿದೆ.

ಹೀಗೆ ಇಲ್ಲಿ ಶಿವನನ್ನೇ ಪರಮಾತ್ಮನೆಂದು ಹೇಳಿದ್ದರೂ ಅವನೇ ಸರ್ವದೇವಮಯನೆಂಬುದನ್ನೂ ಸಹ ಹೃದಯಂಗಮವಾಗಿ ತಿಳಿಸಿರುವ ವಿಷಯವು ಇಲ್ಲಿ ಗಮನಾರ್ಹವೆನಿಸಿದೆ. "ತದೇವಾಗ್ನಿಸ್ತದಾದಿತ್ಯಸ್ತದ್ವಾಯುಸ್ತದು ಚಂದ್ರಮಾಃ। ತದೇವ

ಶುಕ್ರಂ ತದ್ಬ್ರಹ್ಮ ತದಾಪಸ್ತತ್ಪ್ರಜಾಪತಿಃ" ಹೀಗೆ ಶಿವನೇ ಅಗ್ನಿ, ಆದಿತ್ಯ, ವಾಯು, ಚಂದ್ರ, ನೀರು, ಬ್ರಹ್ಮ, ಇಂದ್ರ ಮೊದಲಾದ ದೇವತೆಗಳೂ, ಹಾಗೆಯೇ ಸರ್ವಶ್ರೇಷ್ಠ ವಸ್ತುವೂ ಆಗಿರುವನೆಂದು ತಿಳಿಸಿದ್ದರಿಂದ ಈ ಶ್ರುತಿಯು ಯಾವಾಗಲೂ ಸಮನ್ವಯದೃಷ್ಟಿಯನ್ನೇ ಬೋಧಿಸುವುದಾಗಿ ಕಂಡುಬಂದಿದೆ. ಹಾಗೆಯೇ ಉಪಾಸಕರ ಸ್ವರೂಪವನ್ನು ತಿಳಿಸುವಾಗಲೂ ಗಂಡುಹೆಣ್ಣುಗಳ ಮತ್ತು ಮುದುಕಯುವಕರ ದೇಹಗಳೊಳಗೂ ನೆಲಸಿರುವ ಜೀವನಿಗೆ ಭೇದವಿಲ್ಲವೆಂಬುದನ್ನು ತಿಳಿಸುತ್ತ ಈ ಶ್ರುತಿಯು ಜೀವರಿಗೆ ತಮ್ಮ ಅಂತರಂಗದಲ್ಲಿ ಗೋಪ್ಯವಾಗಿ ನೆಲಸಿರುವ ಶಿವನೊಡನೆ ಸಮರಸವಾಗಿ ಬೆರೆಯುವುದನ್ನು ಬೋಧಿಸುತ್ತಲಿದೆ. ಈ ಬಗೆಯ ಶಿವಯೋಗಕ್ಕೆ ಜೀವರೆಲ್ಲರೂ ಯೋಗ್ಯರೆನಿಸಿರುವರೆಂಬ ಅಂಶವನ್ನು ಈ ಶ್ರುತಿಯು ಒತ್ತಿಹೇಳಿದೆ. ಹೀಗೆ ಶೈವರಿಗೆ ಅತ್ಯಂತಪ್ರಿಯವಾದ ಈ ಉಪನಿಷತ್ತಿಗೆ ಬೇರೆಯವರು ಭಾಷ್ಯವನ್ನು ಬರೆದಿರುವಾಗ ಶೈವಮತಕ್ಕನುಗುಣವಾದ ಭಾಷ್ಯ ಒಂದು ಈವರೆವಿಗೂ ಕಂಡು ಬಂದಿಲ್ಲದಿರುವುದು ಬಹಳ ಶೋಚನೀಯವೆನಿಸಿದೆ. ಈ ಬಗೆಯ ನ್ಯೂನತೆಯನ್ನು ಪರಿಹರಿಸಲು ಈಗ ಪ್ರಯತ್ನಿಸಲಾಗಿದೆ.

ಈ ಉಪನಿಷತ್ತಿಗೆ ಈ ಹೆಸರಿಡಲು ಕಾರಣವನ್ನು ಅದರಲ್ಲಿಯೇ ಕೊನೆಯಲ್ಲಿ ತಿಳಿಸಿದೆ. "ತಪಃಪ್ರಭಾವಾತ್ ಯೋಗಪ್ರಭಾವಾಚ್ಚ ಬ್ರಹ್ಮ ಹ ಶ್ವೇತಾಶ್ವತರೋಽಥ ವಿದ್ವಾನ್। ಅತ್ಯಾಶ್ರಮಿಭ್ಯಃ ಪರಮಂ ಪವಿತ್ರಂ ಪ್ರೋವಾಚ ಸಮ್ಯಕ್ ಋಷಿಸಂಘಜುಷ್ಟಮ್॥" ಎಂಬಲ್ಲಿ ಈ ಉಪನಿಷತ್ತನ್ನು ಶ್ವೇತಾಶ್ವತರನೆಂಬ ಮಹರ್ಷಿಯು ಲೋಕಹಿತಕ್ಕಾಗಿ ಉಪದೇಶಿಸಿದನೆಂದು ತಿಳಿದುಬರುತ್ತದೆ. ಆದ್ದರಿಂದಲೇ ಇದನ್ನು ಅದೇ ಹೆಸರಿನಿಂದ ಕರೆಯಲಾಗಿದೆ. ಇಲ್ಲಿ ಬಂದಿರುವ 'ಅತ್ಯಾಶ್ರಮಿಭ್ಯಃ' ಎಂಬ ಪದವು ಸಂನ್ಯಾಸಿಗಳಿಗೆ ಅನ್ವಯಿಸುವುದೆಂದು ಬೇರೆ ಭಾಷ್ಯಕಾರರು ತಿಳಿಸಿದ್ದಾರೆ. ಅಂತ್ಯಾಶ್ರಮಿಗಳಿಗೆ ಇದು ಅನ್ವಯಿಸುವುದೆಂದು ಕೆಲವರು ಹೇಳುತ್ತಾರೆ. ಸಾಂಪ್ರದಾಯಿಕವೀರಶೈವರಾದರೋ ಈ ಅತ್ಯಾಶ್ರಮಿಪದವು ಆಶ್ರಮಧರ್ಮವನ್ನು ಅತಿಕ್ರಮಿಸಿರುವ ವೀರಶೈವರಿಗೇ ಅನ್ವಯಿಸುವುದೆಂದು ಹೇಳುತ್ತಾರೆ. ಅವರ ಅಭಿಪ್ರಾಯದಂತೆ ಈ ಶ್ರುತಿಯು ವೀರಶೈವರಿಗೇ ವಿಶೇಷವಾಗಿ ಅನ್ವಯಿಸುತ್ತದೆ. 'ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ' ಎಂಬಲ್ಲಿ ಗುಣಕರ್ಮಗಳಿಗನುಗುಣವಾಗಿ ನಾಲ್ಕು ವರ್ಣಗಳನ್ನು ಏರ್ಪಡಿಸಿರುವುದಾಗಿ ಹೇಳಿರುವುದು ವೀರಶೈವರಿಗೆ ಎಷ್ಟರಮಟ್ಟಿಗೆ ಅನ್ವಯಿಸುವುದೆಂಬುದನ್ನು ಗೀತಾಭಾಷ್ಯದಲ್ಲಿ ನಿರೂಪಿಸಲಾಗಿದೆ. ಆದ್ದರಿಂದ ಅಂತ್ಯಾಶ್ರಮಿ ಮತ್ತು ಅತ್ಯಾಶ್ರಮಿ ಎಂಬ ಎರಡು ಅರ್ಥಗಳೂ "ಅಂತ್ಯಾಶ್ರಮಿ" ಎಂಬ ಪದಕ್ಕೆ ಅನ್ವಯಿಸುತ್ತವೆ ಎಂಬುದೇ ನನ್ನ ಆಶಯ. ಹೀಗೆ ಈ ಶ್ರುತಿಯು ಅಂತ್ಯಾಶ್ರಮಿಗಳಿಗಷ್ಟೇ ಅಲ್ಲದೆ ಅತ್ಯಾಶ್ರಮಿಗಳೆನಿಸಿದ ವೀರಶೈವರೆಲ್ಲರಿಗೂ ಆದರಣೀಯವೆನಿಸಿದೆ. ವೀರಶೈವರು ಆಶ್ರಮಧರ್ಮಗಳನ್ನಾಚರಿಸಿದರೂ ಸಹ ನಿತ್ಯಯಜ್ಞವೆನಿಸಿದ ಶಿವಪೂಜೆಗೆ ಮಾತ್ರ ಆಶ್ರಮಧರ್ಮಗಳನ್ನು ಅತಿಕ್ರಮಿಸುತ್ತಾರೆ.

ಆದ್ದರಿಂದ ಅವರು ಅತ್ಯಾಶ್ರಮಿಗಳೆನಿಸಿದ್ದಾರೆ. ಅವರು ಯಾವಾಗಲೂ ಶಿವಪೂಜೆಯನ್ನು ಮಾಡುತ್ತಲೇ ಇರಬೇಕೆಂದೂ, ಶಿವಯೋಗಕ್ಕೆ ಎಂದಿಗೂ ಭಂಗವುಂಟಾಗಬಾರದೆಂದೂ ಈ ಶ್ರುತಿಯು ತಿಳಿಸುತ್ತಿದೆ. ರಜಸ್ವಲೆಯಾದ ಹೆಂಗಸೂ ಸಹ ಶಿವಯಜ್ಞವನ್ನು ಆ ಕಾಲದಲ್ಲೂ ನಡೆಸಲೇಬೇಕೆಂಬ ನಿರ್ಬಂಧವಿದೆ. ಆಕೆ ಆಗ ಸಹಜವಾಗಿ ಅಸ್ಪೃಶ್ಯಳಾಗಿದ್ದರೂ ಶಿವಪೂಜೆಯನ್ನು ಮಾತ್ರ ಮಾಡಲೇಬೇಕು. ಹೀಗೆ ಶಿವನ ಶ್ರೇಷ್ಠತೆಯನ್ನು ತಿಳಿಸುವ ಅನೇಕ ವಾಕ್ಯಗಳು ಈ ಶ್ರುತಿಯಲ್ಲಿ ಕಂಡು ಬಂದಿವೆ. ಆದ್ದರಿಂದಲೇ ಇದಕ್ಕೆ ವೀರಶೈವಮತಕ್ಕನುಗುಣವಾದ ಭಾಷ್ಯವು ಆವಶ್ಯಕವೆನಿಸಿತ್ತು. ಈಶ್ವರನು ಆ ಕೆಲಸವನ್ನು ಈಗ ಮಾಡಿಸಿಕೊಂಡಿರುವನು.

ಈಗ ಇಂತಹ ಭಾಷ್ಯವನ್ನು ಬರೆದರೂ ಇದರಲ್ಲಿ ವೀರಶೈವದರ್ಶನವು ಅಡಗಿದೆಯೇ ಎಂಬ ಪ್ರಶ್ನೆ ಹುಟ್ಟುತ್ತದೆ. ಬೇರೆ ದರ್ಶನಗಳಂತೆ ವೀರಶೈವದರ್ಶನವೂ ಸಹ ಆತ್ಮದರ್ಶನಕ್ಕೆ ಅತ್ಯುತ್ತಮವಾದ ಸಾಧನವೆನಿಸಿದೆ. ಇಲ್ಲಿಯೂ ಸಹ ಸಿದ್ಧಾಂತ, ಸಂಪ್ರದಾಯ ಎಂದು ಎರಡು ಭಾಗಗಳಿವೆ. ಸಿದ್ಧಾಂತವನ್ನು ಶಕ್ತಿವಿಶಿಷ್ಟಾದ್ವೈತವೆಂದೂ, ಸಂಪ್ರದಾಯವನ್ನು ಷಟ್ಸ್ಥಲೋಪಾಸನವೆಂದೂ ವ್ಯವಹರಿಸಲಾಗಿದೆ. ಇವೆರಡೂ ಸೇರಿ ಒಂದು ದರ್ಶನವೆನಿಸಿವೆ. ಈ ಶ್ವೇತಾಶ್ವತರಶ್ರುತಿಯಲ್ಲಿ ಇವೆರಡಕ್ಕೂ ಅವಕಾಶವಿದೆಯೇ ಎಂಬ ಅಂಶವನ್ನು ಈಗ ಪರಿಶೀಲಿಸಬೇಕಾಗಿದೆ. ಮೊದಲು ಸಿದ್ಧಾಂತ ಮತ್ತು ಸಂಪ್ರದಾಯ ಇವುಗಳ ಸ್ವರೂಪವನ್ನು ವಿವೇಚಿಸಲಾಗುವುದು. ಸಿದ್ಧಾಂತಭಾಗದಲ್ಲಿ ಶಕ್ತಿಗೂ ಶಕ್ತಿವಿಶಿಷ್ಟಶಿವನಿಗೂ ಅದ್ವೈತವನ್ನು ಸಾಧಿಸಲಾಗಿದೆ. ಇಲ್ಲಿ ಶಿವನೇ ಜಗದ್ವ್ಯಾಪಾರವನ್ನು ನಿರ್ವಹಿಸುವನೆಂದು ತಿಳಿಸಲಾಗಿದೆ. ಆದ್ದರಿಂದ ಅವನಿಗೆ ಅದನ್ನು ನಿರ್ವಹಿಸುವ ಸಾಮರ್ಥ್ಯವೂ ಆವಶ್ಯಕವೆನಿಸಿದೆ. ಈ ಸಾಮರ್ಥ್ಯವನ್ನೇ ಶಕ್ತಿವಿಶೇಷವೆಂದು ಪರಿಗಣಿಸಿದೆ. ಈ ಶಕ್ತಿಯೊಡಗೂಡಿದ್ದರಿಂದಲೇ ಶಿವನನ್ನು ಪತಿ, ಪ್ರಭು, ಮಹಾದೇವ ಎಂದು ಮುಂತಾಗಿ ವ್ಯವಹರಿಸಲಾಗಿದೆ. ಹೀಗೆ ಜಗದ್ವ್ಯಾಪಾರನಿರ್ವಾಹಕ್ಕೆ ಶಕ್ತಿಯು ಅನಿವಾರ್ಯವೆನಿಸಿದ್ದರೂ ಇದು ಅವನಿಗೆ ಅಧೀನವೆನಿಸಿ ಅವನ ಸಂತೋಷಕ್ಕಾಗಿಯೇ ಹೊರಗೆ ಬಂದು ಪ್ರಪಂಚದ ಆಕಾರವಾಗಿ ಪರಿಣಮಿಸುತ್ತದೆ. ಶಿವನ ಪ್ರಾಣವೆನಿಸಿ ಅವನಲ್ಲಿಯೇ ಅನನ್ಯಭಾವದಿಂದ ನೆಲಸಿರುವ ಶಕ್ತಿಯು ಜಗದ್ರೂಪವಾಗಿ ಪರಿಣಮಿಸಿದಾಗ ಅದಕ್ಕೂ ಶಿವನಿಗೂ ಭೇದವುಂಟಾಗುವುದು ಸಹಜ. ಶಿವನು 'ಶಿವ ಏವ ಕೇವಲಃ' ಎಂದು ಈ ಶ್ರುತಿಯಲ್ಲಿ ಹೇಳಿರುವಂತೆ ನಿರಾಕಾರನೆನಿಸಿದ್ದರೂ ತ್ರಿಮೂರ್ತಿಗಳಾಗಿ ಪರಿಣಮಿಸುವನು. ಹಾಗೆಯೇ ನಿರಾಕಾರವೆನಿಸಿದ ಶಕ್ತಿಯು ಲಕ್ಷ್ಮಿ, ಸರಸ್ವತಿ, ಪಾರ್ವತಿ ಎಂಬ ಆಕಾರಗಳನ್ನು ತಾಳುವುದು. ಹೀಗೆ ಅಮೂರ್ತಸ್ಥಿತಿಯಲ್ಲಿ ಶಿವಶಕ್ತಿಯರಿಗೆ ಅಭೇದವಿದ್ದರೂ ಜಗತ್ತಿನ ಕಾರ್ಯಕ್ಕಾಗಿ ಶಕ್ತಿವಿಶಿಷ್ಟಶಿವನೇ ಭಿನ್ನರೂಪದಿಂದ ಪರಿಣಮಿಸುತ್ತಾನೆ. ಹೀಗೆ ಭಿನ್ನರೆನಿಸಿದ ಶಿವಶಕ್ತಿಯರಿಗೆ ಅದ್ವೈತವನ್ನು ಬೋಧಿಸುವುದರಿಂದ ವೀರಶೈವ ಸಿದ್ಧಾಂತವನ್ನು ಶಕ್ತಿವಿಶಿಷ್ಟಾದ್ವೈತವೆಂದು ಕರೆಯಲಾಗಿದೆ. ಹೀಗೆ ಶಿವಶಕ್ತಿಯರಿಗೆ

ಸಾಮರಸ್ಯವನ್ನು ಹೇಳುವಂತೆಯೇ ಚಿತ್ತಶಕ್ತಿಯೊಡಗೂಡಿರುವ ಶಿವಾಂಶನಾದ ಜೀವ ನಿಗೆ ಚಿಚ್ಛಕ್ತಿಯೊಡಗೂಡಿರುವ ಶಿವನೊಡನೆ ಸಾಮರಸ್ಯವನ್ನು ಹೇಳುವುದರಿಂದಲೂ ಶಕ್ತಿವಿಶಿಷ್ಟಾದ್ವೈತವೆಂಬ ಹೆಸರು ವೀರಶೈವಸಿದ್ಧಾಂತಕ್ಕೆ ಅನ್ವರ್ಥವೆನಿಸುತ್ತದೆ. ಜೀವನು ಶಿವಾಂಶನಾದರೂ ಚಿಚ್ಛಕ್ತಿಯ ಸಂಕೋಚವೆನಿಸಿದ ಚಿತ್ತಶಕ್ತಿಯೊಡನೆ ನೆಲಸಿರುವನು. ಈ ಚಿತ್ತವನ್ನು ಪ್ರಕೃತಿ, ಮಾಯೆ ಎಂದೂ ಕರೆಯಲಾಗಿದೆ. ಇದು ಜೀವನ ಸರ್ವಜ್ಞತ್ವ ಮೊದಲಾದ ಐಶ್ವರ್ಯಗಳನ್ನು ಅಪಹರಿಸಿದೆ. ಆದ್ದರಿಂದ ಇವನ ಶಕ್ತಿ ಸಹಜವಾಗಿ ಸಂಕೋಚಗೊಂಡಿದೆ. ಹೀಗೆ ಸ್ವಾಭಾವಿಕವಾಗಿ ಶಿವನಿಂದ ಭಿನ್ನನಾದರೂ ಜೀವನು ಗುರುವಿನಿಂದ ತನ್ನ ಮುಂದಿನ ದಾರಿಯನ್ನು ತಿಳಿದು ನಿರಂತರೋಪಾಸನದಿಂದ ಶಿವನೊಡನೆರಸಿ ತನ್ನ ವಾಸ್ತವವಾದ ಶಿವಭಾವವನ್ನು ಅನು ಭವಿಸುತ್ತಾನೆ. ಹೀಗೆ ಅವರಿಬ್ಬರಿಗೂ ಅದ್ವೈತವನ್ನು ಪ್ರತಿಪಾದಿಸುವುದರಿಂದ ವೀರಶೈವಸಿದ್ಧಾಂತಕ್ಕೆ ಶಕ್ತಿವಿಶಿಷ್ಟಾದ್ವೈತವೆಂಬ ಹೆಸರು ಯುಕ್ತವೆನಿಸುತ್ತದೆ. ಸತ್ತ್ವರಜಸ್ತಮೋಗುಣಗಳೆನಿಸಿದ ಜೀವನ ಪ್ರಕೃತಿಯು ಶಿವನ ನಿರಂತರೋಪಾಸನ ದಿಂದ ಸಚ್ಚಿದಾನಂದರೂಪವಾಗಿ ಪರಿಣಮಿಸುತ್ತದೆ. ಆಗ ಜೀವನಿಗೆ ತನ್ನ ವಾಸ್ತವ ವಾದ ಶಿವಭಾವವು ತನ್ನಲ್ಲಿಯೇ ವಿಕಾಸವಾಗುವುದು. ಹೀಗೆ ಮಾನವೀಪ್ರಕೃತಿಯೇ ದೈವೀಪ್ರಕೃತಿಯಾಗಿ ಪರಿಣಮಿಸಲು ಜೀವನು ತನ್ನ ಶಿವಭಾವವನ್ನು ಅನುಭವಿಸ ತೊಡಗುವುದು ಸಹಜ. ಇದೇ ರೀತಿಯಲ್ಲಿ ಶಿವನ ಪರಿಣಾಮವೆನಿಸಿದ ಪ್ರಪಂಚಕ್ಕೂ ಶಿವನಿಗೂ ಶರೀರಭಾವದಿಂದ ಭೇದವಿದ್ದರೂ ವಾಸ್ತವವಾಗಿ ಅಭೇದವನ್ನು ತಿಳಿಸು ವುದರಿಂದ ವೀರಶೈವಸಿದ್ಧಾಂತವು ಭೇದಾಭೇದಮತವೆನಿಸಿದೆ. ಹೀಗೆ ಬದ್ಧಾವಸ್ಥೆ ಯಲ್ಲಿ ಜೀವನಿಗೆ ಶಿವನಿಂದ ಭೇದವು ಹೇಗೆ ಸತ್ಯವೋ ಹಾಗೆಯೇ ಬುದ್ಧಾವಸ್ಥೆಯಲ್ಲಿ ಅವರಿಬ್ಬರಿಗೂ ಅಭೇದವೂ ಸತ್ಯವೆನಿಸಿದೆ. "ಜೀವನೂ ಸತ್ಯವೇ; ಜಗತ್ತೂ ಸತ್ಯವೇ; ಶಿವನೂ ಸತ್ಯವೇ; ಕ್ರಿಮಿಯು ಭ್ರಮರವಾಗುವಂತೆ ಜೀವನು ಶಿವನಾಗು ವುದೂ ಸತ್ಯವೇ. ಹಾಗೆಯೇ ಐಕ್ಯದಶೆಯಲ್ಲಿ ಶಿವಜೀವರಿಗೆ ಸಂಭವಿಸುವ ಅಭೇದವೂ ಸತ್ಯವೇ". ಹೀಗೆ ವೀರಶೈವಸಿದ್ಧಾಂತವನ್ನು ಅನುಭವಿಗಳು ವಿವೇಚನೆಮಾಡಿದ್ದಾರೆ.

ಈ ಸಿದ್ಧಾಂತವನ್ನು ಶ್ವೇತಾಶ್ವತರೋಪನಿಷತ್ತು ನಿರೂಪಿಸುತ್ತದೆಯೇ ಇಲ್ಲವೇ ಎಂಬುದನ್ನು ಈಗ ಪರಿಶೀಲಿಸಲಾಗುವುದು. ಈ ಶ್ರುತಿಯು ಬ್ರಹ್ಮಜಿಜ್ಞಾಸೆ ಯಿಂದಲೇ ಆರಂಭವಾಗಿದೆ. "ಬ್ರಹ್ಮಕ್ಕೂ ಜಗತ್ತಿಗೂ ಸಂಬಂಧವೇನು? ನಾವು ಹೇಗೆ ಬ್ರಹ್ಮಕ್ಕೆ ಸಂಬಂಧಿಸಿರುವೆವು?" ಈ ಬಗೆಯ ಪ್ರಶ್ನೆಗಳಿಂದ ಆರಂಭವಾಗುವ ಶ್ರುತಿಯು ಮುಂದೆ ಜಗತ್ತಿನ ಮತ್ತು ಜೀವನ ಸ್ವರೂಪಸಂಬಂಧಗಳನ್ನು ವಿವೇಚನೆ ಮಾಡುತ್ತದೆ. ಶಿವನು ತನ್ನ ಶಕ್ತಿಯಿಂದಲೇ ತನ್ನ ಸಂತೋಷಕ್ಕಾಗಿಯೇ ಜಗತ್ತಿನ ವ್ಯವಹಾರಗಳೆಲ್ಲವನ್ನೂ ನಿರ್ವಹಿಸುತ್ತಿರುವನೆಂಬ ಸಮಾಧಾನವನ್ನು ಶ್ರುತಿಯು ತಿಳಿ ಸುತ್ತದೆ. ಶಿವನಲ್ಲಿ ಸಚ್ಚಿದಾನಂದರೂಪವಾದ ಶಕ್ತಿಯು ಸಹಜವಾಗಿ ನೆಲಸಿದೆ. ಆದರಲ್ಲಿ ಅವನು ಯಾವಾಗಲೂ ರಮಿಸುತ್ತಿರುವುದರಿಂದ ಅವನನ್ನು ಸದಾಶಿವನೆಂದು

ಅನುಭವಿಗಳು ಕರೆದಿದ್ದಾರೆ. ಹೀಗೆ ಶಿವನಲ್ಲಿ ಶಕ್ತಿಯು ಸ್ವಾಭಾವಿಕವೆನಿಸಿರುವುದನ್ನು "ಪರಾsಸ್ಯ ಶಕ್ತಿ" ಎಂಬ ಶ್ರುತಿಯು ಸ್ಪಷ್ಟಪಡಿಸಿದೆ. ಅದೇ ಶಕ್ತಿಯು ತ್ರಿಗುಣ ಮಯವೆನಿಸಿ ಚಿತ್ರವಿಚಿತ್ರವಾಗಿ ಪರಿಣಮಿಸುವುದರಿಂದ ಮಾಯೆ ಎನಿಸುತ್ತದೆ. ಜಗದ್ವ್ಯಾಪಾರಗಳನ್ನು ನಿರ್ವಹಿಸಲು ಶಿವನು ಇದೇ ಶಕ್ತಿಯನ್ನು ಉಪಯೋಗಿಸಿ ಕೊಳ್ಳುತ್ತಿರುವನು ; ಆದರೆ ಆತ್ಮಾನಂದಾನುಭವಕ್ಕೆ ಚಿದ್ರೂಪವೆನಿಸಿದ ಪರಾಶಕ್ತಿ ಯನ್ನು ಉಪಯೋಗಿಸಿಕೊಳ್ಳುವನು. ಶಿವಶಕ್ತಿಯರಿಗೆ ಶಿವ–ಮಾಯೆ ಎಂಬ ರೂಪ ದಿಂದ ಭೇದವಿದ್ದರೂ, ಶಿವ–ಚಿಚ್ಛಕ್ತಿ ಎಂಬ ರೂಪದಿಂದ ಅಭೇದವಿರುವ ಪ್ರಯುಕ್ತ ಶಕ್ತಿವಿಶಿಷ್ಟಾದ್ವೈತವು ಸರ್ವಮಾನವರಿಗೂ ಸಮ್ಮತಿಸುವುದೆಂದು ಅನುಭವಿಗಳು ಹೇಳು ತ್ತಾರೆ. ಹೀಗೆ ಭೇದವಿದ್ದರೂ ಅಭೇದವನ್ನು ತಿಳಿಸುವ ಚಾತುರ್ಯವನ್ನು ಬ್ರಹ್ಮ ವಾದಿಗಳು ತಿಳಿದು ಅನುಭವಿಸಿರುವುದರಿಂದ ಅದನ್ನು ತಿಳಿಸಿರುವ ಶ್ವೇತಾಶ್ವತರಶ್ರುತಿಗೆ ವಿವರಣವು ಅವಶ್ಯಕವೆನಿಸಿದೆ. ಶಿವನಲ್ಲಿರುವ ಚಿಚ್ಛಕ್ತಿಯೇ ಚೈತನ್ಯಾಂಶವನ್ನು ಕಳೆದುಕೊಂಡು ಸತ್ತ್ವರಜಸ್ತಮೋಗುಣಗಳಾಗಿ ಪರಿಣಮಿಸಿ ಮಾಯೆ, ಚಿತ್ತ, ಪ್ರಕೃತಿ ಎನಿಸಿರುವುದಾಗಿ ಹಿಂದೆಯೇ ತಿಳಿಸಿದೆ. ಚಿತ್ತವು ಚಿದ್ರೂಪದಿಂದ ಪರಿ ಣಮಿಸಲಿಕ್ಕೂ, ಜೀವನು ಶಿವನಾಗಲಿಕ್ಕೂ ಮೂರು ಬಗೆಯ ಉಪಾಸನವನ್ನು ಈ ಶ್ರುತಿಯೇ ತಿಳಿಸಿದೆ. ಹಾಗೆಯೇ ಮಾನವಜೀವನವು ಪ್ರಸಾದಮಯವಾಗಲಿಕ್ಕೂ ಶ್ರುತಿಯು ಸಾಧಕವಾಗಿದೆ. ಆದ್ದರಿಂದ ವೀರಶೈವದರ್ಶನಕ್ಕನುಗುಣವಾಗಿ ಈ ಈ ಶ್ರುತಿಗೆ ವಿವರಣವು ಅವಶ್ಯಕವೆನಿಸಿದೆ. ಮಾನವದೇಹವನ್ನು ದೇವಾಲಯ ವೆಂದು ಭಾವಿಸಿ ಅಲ್ಲಿಯೇ ಶಿವನನ್ನು ತಿಳಿದು ಅರ್ಚಿಸಲಿಕ್ಕೂ ಅವನ ಪ್ರಸಾದವನ್ನು ಅನುಭವಿಸಲಿಕ್ಕೂ ಸದವಕಾಶವನ್ನು ಈ ಶ್ರುತಿಯು ಸಾಧಕರೆಲ್ಲರಿಗೂ ಕಲ್ಪಿಸಿದೆ. ವೀರಶೈವದರ್ಶನದ ಗುರಿಯೂ ಇದೇ ಆಗಿದೆ ಎಂಬುದು ಎಲ್ಲರಿಗೂ ತಿಳಿದಿದೆ.

ಹೀಗೆ ಈ ಶ್ರುತಿಯಲ್ಲಿ ಸಾಧಕನಿಗೆ ಮನೋನೈರ್ಮಲ್ಯವನ್ನು ದೊರಕಿಸುವ ಮೂಲಕ ಹೃದಯದಲ್ಲಿರುವ ಈಶ್ವರನನ್ನು ತಿಳಿಸಿ ಅವನೊಡನೆ ಸಮರಸವಾಗಿ ಬೆರೆ ಯಲು ಶಿವಯೋಗವನ್ನು ಉಪದೇಶಿಸಲಾಗಿದೆ. ಆದರೂ ಅಲ್ಪಜ್ಞನೂ, ಅಲ್ಪ ಶಕ್ತನೂ, ಅಣುವೂ ಆದ ಜೀವನಿಗೆ ಸರ್ವಜ್ಞನೂ, ಸರ್ವಶಕ್ತನೂ, ವಿಭುವೂ ಆದ ಶಿವನೊಡನೆ ಯೋಗವು ಸಂಭವಿಸಬಹುದೇ ಎಂಬ ವಿಚಾರವನ್ನು ಇಲ್ಲಿ ಆಲೋಚಿಸ ಬೇಕಾಗಿದೆ. ಇಬ್ಬರಿಗೂ ಶಕ್ತಿಯಲ್ಲಿ ಭೇದವಿದೆಯಾದರೂ ಇಬ್ಬರೂ ಚೇತನರೆನಿಸಿ ಒಂದೇ ಕಡೆ ಅಂದರೆ ಹೃದಯದಲ್ಲಿ ನೆಲಸಿರುವುದರಿಂದ ಇಬ್ಬರಿಗೂ ಯೋಗವು ದೊರಕಬಹುದೇ ಎಂಬುದೇ ಈಗಿನ ಪ್ರಶ್ನೆಯಾಗಿದೆ. ಶ್ರುತಿಯಂತೂ ಅವರಿಬ್ಬ ರಿಗೂ ಯೋಗವನ್ನು ಸ್ಪಷ್ಟವಾಗಿ ತಿಳಿಸಿದೆ. ಶ್ರುತಿಯು ಎಲ್ಲರಿಗೂ ಪ್ರಮಾಣವೆನಿಸಿ ದ್ದರಿಂದ ಅದನ್ನು ಎಲ್ಲರೂ ಪುರಸ್ಕರಿಸಲೇಬೇಕು. ಈ ಯೋಗವು ಜಿಜ್ಞಾಸಿಗೆ ಸೇರಿದ ಇವರಿಬ್ಬರಿಗೂ ಇಲ್ಲಿಯೇ ನಿರ್ಮಲಹೃದಯದಲ್ಲಿಯೇ ದೊರಕಬೇಕೆಂದು ಶ್ರುತಿಯೇ ತಿಳಿಸಿದೆ; ಆದರೆ ಈ ಯೋಗ ಹೇಗೆ ದೊರಕುತ್ತದೆ. ಎಂಬಲ್ಲಿ ಜೀವನಿಗೆ ಶಿವನ

ಜ್ಞಾನವನ್ನೇ ಪ್ರಧಾನಸಾಧನವೆಂದು ಇಲ್ಲಿ ತಿಳಿಸಲಾಗಿದೆ. ಜ್ಞಾನವಷ್ಟರಿಂದಲೇ ಈ ಯೋಗವು ಲಭಿಸಲಾರದೆಂದು ಭಾವಿಸಿ ಶ್ರುತಿಯೇ ಆ ಜ್ಞಾನದೊಡನೆ ಮೂರು ಬಗೆಯ ಉಪಾಸನೆಯನ್ನು ವಿಧಿಸಿದೆ. ಶಿವನನ್ನು ಒಳಗೆ ಧ್ಯಾನಿಸಬೇಕೆಂದೂ, ಹೊರಗೆ ಧರಿಸಿ ಅರ್ಚಿಸಬೇಕೆಂದೂ, ಇದರಿಂದ ಶಿವನೊಡವೆರಸಿ ವ್ಯವಹರಿಸಬಹುದೆಂದೂ ಮೂರು ಬಗೆಯ ಉಪಾಸನವನ್ನು ಶ್ರುತಿಯೇ ಸ್ಪಷ್ಟಪಡಿಸಿದೆ. ತದಭಿಧ್ಯಾನ, ತದ್ಯೋಜನ, ತದ್ಭಾವ ಈ ಮೂರು ಬಗೆಯ ಉಪಾಸನವನ್ನು ಸಾಧಕರೆಲ್ಲರಿಗೂ ಶ್ರುತಿಯು ಒತ್ತಾಯಪಡಿಸಿದೆ. ಹೀಗೆ ಜ್ಞಾನದೊಡಗೂಡಿದ ಉಪಾಸನದಿಂದ ಇಲ್ಲಿಯೇ ಪ್ರಸಾದಕಾಯದಲ್ಲಿ ಶಿವಯೋಗವನ್ನು ಸಾಧಕನು ಅನುಭವಿಸಬೇಕೆಂಬುದೇ ಶ್ರುತಿಯ ಉಪದೇಶ. ಇದು ಸಂಪೂರ್ಣವಾಗಿ ವಿಶ್ವಾಸದ ವಿಷಯ. ಅಲ್ಲಮಪ್ರಭು ಇದನ್ನು ಸ್ಪಷ್ಟಪಡಿಸಿದ್ದಾನೆ. "ಎತ್ತಣ ಮಾಮರ, ಎತ್ತಣ ಕೋಗಿಲೆ? ಎತ್ತಣಿಂದೆತ್ತ ಸಂಬಂಧವಯ್ಯ! ಬೆಟ್ಟದ ನೆಲ್ಲಿಯಕಾಯಿ ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತವಯ್ಯ ಸಂಬಂಧ! ಗುಹೇಶ್ವರಲಿಂಗಕ್ಕೆಯೂ ಎನಗೆಯೂ ಎತ್ತಣಿಂದೆತ್ತ ಸಂಬಂಧವಯ್ಯ!" ಹೀಗೆ ಭಿನ್ನಜಾತಿಯ ಕೋಗಿಲೆ ಮಾವಿನ ಮರಗಳು ಬೇರೆ ಬೇರೆ ಕಡೆಗಳಲ್ಲಿದ್ದರೂ ಅವಕ್ಕೆ ಹೇಗೋ ಯೋಗವು ಕೊಡುತ್ತದೆ. ಹಾಗೆಯೇ ನೆಲ್ಲಿಯಕಾಯಿ ಬೆಟ್ಟದಲ್ಲಿದ್ದು, ಉಪ್ಪು ಸಮುದ್ರದಲ್ಲಿದ್ದರೂ ಅವೆರಡಕ್ಕೆ ಹೇಗೋ ಸಂಬಂಧವು ಹೊಂದುತ್ತದೆ. ಅದರಂತೆ ಜೀವಪರಮಾತ್ಮರು ಬೇರೆ ಬೇರೆ ಸ್ವಭಾವದವರಾಗಿದ್ದರೂ ಅವರಿಗೂ ಯೋಗವು ಸಂಭವಿಸುತ್ತದೆ. ಇದರಲ್ಲಿ ಅನೌಚಿತ್ಯವೇನೂ ಕಾಣುವುದಿಲ್ಲ. ಶಿವನಿಗಾದರೋ ತನ್ನ ಸಂಬಂಧಿಯಾದ ಜೀವನಲ್ಲಿ ಅವ್ಯಾಜವಾದ ಪ್ರೇಮವಿದ್ದೇ ಇದೆ. ಜೀವನು ತನ್ನ ಬಂಧುವಾದ ಶಿವನನ್ನು ವಿಶ್ವಾಸದಿಂದ ಕರೆದರೆ ಆ ಕರೆಯನ್ನು ಅವನು ಕೇಳದೇ ಇರಲಾರನು. "ನಂಬದೆ ನೆಚ್ಚದೆ ಬರದೆ ಕರೆವರು; ನಂಬಲರಿಯರು ಲೋಕದ ಮನುಜರು. ನಂಬಿ ಕರೆದರೆ ಓ ಎನ್ನನೇ ಶಿವನು, ನಂಬದೆ ನೆಚ್ಚದೆ ಬರಿದೆ ಕರೆವನ ಕೊಂಬ ಮೆಟ್ಟಿಕೂಗೆಂದ ಕೂಡಲಸಂಗಮದೇವ" ಹೀಗೆ ಮಹಾತ್ಮ ಬಸವಣ್ಣನು ಮಾನವನಿಗೆ ತನ್ನ ಹೃದಯದಲ್ಲಿ ಪೂರ್ಣವಿಶ್ವಾಸವಿಟ್ಟು ಅಲ್ಲಿರುವ ಈಶ್ವರನಲ್ಲಿ ರಮಿಸುತ್ತಲೇ ಹೊರಗಿನ ವ್ಯವಹಾರಗಳನ್ನು ಅವನ ಪ್ರೀತಿಗಾಗಿಯೇ ನಡೆಸಬೇಕೆಂದು ತಿಳಿಸಿರುವನು. ಇದರಿಂದ ಮಾನವನ ಮನಸ್ಸು ಪ್ರಸನ್ನವಾಗುವುದು; ಆಗಲೇ ರಾಗದ್ವೇಷಗಳು ದೂರ ಸರಿಯುವುವು. ಹೀಗೆ ನಿಷ್ಕಲ್ಮಷವಾದ ಹೃದಯದಲ್ಲಿ ಗುಹೇಶ್ವರನನ್ನು ಸಾಧಕರು ಅವಶ್ಯಕವಾಗಿ ತಿಳಿಯಲೇಬೇಕೆಂದೂ, ಇದರಿಂದಲೇ ಅವರಿಗೆ ಪಾಶವು ತೊಲಗುವುದೆಂದೂ ಶ್ರುತಿಯು ತಿಳಿಸಿದೆ. ಈ ಬಗೆಯ ಯೋಗವನ್ನು ಮಾನವಕಲ್ಯಾಣಕ್ಕಾಗಿ ಶ್ರುತಿಯು ಉಪದೇಶಿಸಿದೆ.

ಹೀಗೆ ಈ ಶ್ರುತಿಯಲ್ಲಿ ಶಿವಯೋಗರೂಪವಾದ ಸಿದ್ಧಾಂತವನ್ನು ನಿರೂಪಿಸಿದ್ದರೂ ಅದನ್ನು ದೊರಕಿಸುವ ಉಪಾಯವನ್ನು ಇದು ತಿಳಿಸುತ್ತದೆಯೋ ಎಂಬ

ಅಂಶವನ್ನು ಈಗ ಪರಿಶೀಲಿಸಲಾಗುವುದು. ಈ ಉಪಾಯವನ್ನು ತಿಳಿಸುವುದೇ ಸಂಪ್ರದಾಯವೆನಿಸುತ್ತದೆ. ಇದಕ್ಕೂ ಸಿದ್ಧಾಂತಕ್ಕೂ ಸಾಮರಸ್ಯವಿದ್ದರೆಯೇ ಒಂದು ಸಿದ್ಧಾಂತವು ವೀರ್ಯವತ್ತರವೆನಿಸುತ್ತದೆ. ಅವೆರಡಕ್ಕೂ ಹೊಂದಿಕೆ ಇಲ್ಲದಿದ್ದರೆ ಆ ಸಿದ್ಧಾಂತವೇ ಯಾರಿಗೂ ರುಚಿಸುವುದಿಲ್ಲ. ಇಂತಹ ನಿರ್ವೀರ್ಯವಾದ ಸಿದ್ಧಾಂತ ವನ್ನು ಅನುಸರಿಸುವವನಿಗೆ ಶಾಂತಿಯೇ ದೊರೆಯಲಾರದು. ವೀರಶೈವದರ್ಶನದಲ್ಲಾ ದರೋ ಸಿದ್ಧಾಂತಸಂಪ್ರದಾಯಗಳಿಗೆ ಏಕರೂಪತೆಯು ನೆಲಸಿರುವುದೇ ಒಂದು ವೈಶಿಷ್ಟ್ಯವೆನಿಸಿದೆ. ಷಟ್ಸ್ಥಲಾತ್ಮಕನಾದ ಜೀವನು ಷಟ್ಸ್ಥಲಾತ್ಮಕನಾದ ಶಿವನಿಗೆ ಷಡ್ವಿಷಯಗಳನ್ನು ಷಡ್ವಿಧಭಕ್ತಿಯಿಂದ ಸಮರ್ಪಿಸುತ್ತ ಷಡ್ವಿಧಪ್ರಸಾದವನ್ನು ಭೋಗಿಸುತ್ತಲೇ ಶಿವನೊಡನೆ ಸಾಮರಸ್ಯವನ್ನು ಅನುಭವಿಸುವನೆಂಬುದನ್ನೇ "ಷಟ್ಸ್ಥ ಲೋಪಾಸನ"ವೆಂಬ ಸಂಪ್ರದಾಯವು ಬೋಧಿಸುತ್ತಲಿದೆ. ಆರು ಬಗೆಯಾಗಿರುವ ಜೀವನು ತನ್ನೊಳಗೆ ಆ ಆರು ಇಂದ್ರಿಯಗಳಲ್ಲಿಯೇ ಆರು ಬಗೆಯಾಗಿರುವ ಶಿವನಿಗೆ ಆರು ಬಗೆಯ ಭೋಗ್ಯವಸ್ತುಗಳನ್ನು ಆರು ಬಗೆಯ ಭಕ್ತಿಯಿಂದ ಅರ್ಪಿಸುವುದೇ ಷಟ್ಸ್ಥಲೋಪಾಸನವೆನಿಸುತ್ತದೆ. ಇದನ್ನು ತ್ರಿವಿಧೋಪಾಸನದಲ್ಲಿಯೇ ಶ್ವೇತಾಶ್ವತ ರೋಪನಿಷತ್ತು ಅಡಗಿಸಿದೆ. ಈ ಮೂರು ಬಗೆಯ ಉಪಾಸನವೇ ಮತ್ತೆ ಒಂದೊಂದು ಎರಡೆರಡಾಗಿ ಆರು ಬಗೆಯಾಗುತ್ತದೆ. " ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವ ಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ " ಎಂಬ ಮಂತ್ರದಲ್ಲಿ ಮಹರ್ಷಿಯು ತ್ರಿವಿಧೋಪಾಸನವನ್ನು ವಿಧಿಸಿದ್ದಾನೆ. ಜೀವನಿಗೆ ಶಿವನ ನಿರಂತರ ಸಂಪರ್ಕವಿರ ಬೇಕಾದ್ದರಿಂದ ಹೊರಗೆ ದೇಹದಲ್ಲಿ ಆ ಶಿವನನ್ನು ಧರಿಸುವುದೇ ಯೋಜನವೆನಿಸುತ್ತದೆ. ಇದನ್ನು ವೀರಶೈವ ಸಂಪ್ರದಾಯವು ಇಷ್ಟಲಿಂಗಧಾರಣವೆಂದು ಕರೆದಿದೆ. ಹಾಗೆಯೇ ಹೃದಯದಲ್ಲಿ ಶೋಭಿಸುವ ಆ ಈಶ್ವರನನ್ನೇ ನಿರ್ಮಲಹೃದಯದಿಂದ ಧ್ಯಾನಿಸುವುದೇ ಪ್ರಾಣಲಿಂಗಾರ್ಚನವೆಂದು ವೀರಶೈವಸಂಪ್ರದಾಯವು ತಿಳಿಸಿದೆ. ಇದನ್ನೂ ಸಹ ಶ್ರುತಿಯೇ ಸ್ಪಷ್ಟವಾಗಿ ತಿಳಿಸಿದೆ. ಹೀಗೆ ಜೀವನು ಪ್ರಾಣದಂತೆ ಪ್ರಿಯನಾದ ಶಿವ ನನ್ನು ಒಳಗೂ ಹೊರಗೂ ಅನುಭವಿಸುತ್ತ ಆಯಾ ಕಾಲದ ಸುಖದುಃಖಗಳನ್ನು ಶಿವನ ಪ್ರಸಾದವೆಂದು ಸ್ವೀಕರಿಸುತ್ತ ಶಿರಸ್ಸಿನಲ್ಲಿ ಶೋಭಿಸುವ ಭಾವಲಿಂಗದೊಡನೆ ಸಮರಸವಾಗಿ ಬೆರೆತು ಅಮೃತನಾಗುವನು. ವೀರಶೈವಸಂಪ್ರದಾಯವು ಇದನ್ನು ಭಾವಲಿಂಗಾರ್ಚನವೆಂದು ಕರೆದಿದೆ. ಈ ತ್ರಿವಿಧೋಪಾಸನವೇ ಲಿಂಗಾಂಗಸಾಮ ರಸ್ಯವನ್ನು ಸಾಧಿಸುತ್ತದೆ. ದೇಹದಲ್ಲಿರುವ ಶಿವನು ಮಹಾಪ್ರಕಾಶನೂ, ಸರ್ವಾ ಧಾರನೂ ಆದ್ದರಿಂದ ಲಿಂಗವೆನಿಸಿ ಸರ್ವರಿಗೂ ಉಪಾಸ್ಯನೆನಿಸಿರುವನು. ಆ ಶಿವನ ಅಂಶನೇ ಆಗಿರುವ ಜೀವನ ಅಲ್ಪಪ್ರಕಾಶನೂ ಅಲ್ಪಶಕ್ತಿಕನೂ ಆಗಿ ಉಪಾಸಕನೆನಿ ಸಿರುವನು; ಹಾಗೆಯೇ ಶಿವನ ಲೀಲಾವಿನೋದಕ್ಕಾಶ್ರಯನಾದ್ದರಿಂದ ಅಂಗನೆನಿ ಸಿರುವನು. ಇಂತಹ ಜೀವನು ಗುರುವಿನ ಕರುಣೆಯಿಂದ ತನ್ನ ಪ್ರಾಣಲಿಂಗವನ್ನು ಹೊರಗೆ ಅರ್ಚನೆಗಾಗಿ ಪಡೆಯುವನು. ಇದು ಅವನಿಗೆ ಪ್ರಿಯವಾದ್ದರಿಂದ ಇಷ್ಟ

ಲಿಂಗಹೆನಿಸುವುದು. ಇವರ ನಿತ್ಯಸಂಪರ್ಕದಿಂದ ಅವನಿಗೆ ಪ್ರಾಣಾಲಿಂಗದ ಅನುಭವ ಸಹಜವಾಗುವುದು. ಅಲ್ಲಿಂದ ಮುಂದೆ ಅವನು ಭಾವರೂಪದಿಂದ ಎಲ್ಲರೊಳಗೂ ನೆಲಸಿರುವ ಶಿವನನ್ನೇ ಕಾಣತೊಡಗುವನು. ಹೀಗೆ ದೇಹದಲ್ಲಿ ಇಷ್ಟಪ್ರಾಣಭಾವನೆನೆನಿಸಿದ ಶಿವನ ನಿರಂತರೋಪಾಸನದಿಂದ ಜೀವನು ಯೋಗಿಯಾಗುವನು.

ಶಿವನ ಉಪಾಸನದಿಂದಲೇ ಜೀವನಿಗೆ ಈ ಬಗೆಯ ಹೆಸರು ಸಹಜವೆನಿಸುತ್ತದೆ. ಜೀವನು ತನ್ನ ಇಷ್ಟದೈವವೆನಿಸಿದ ಶಿವಲಿಂಗದ ಸೇವೆಗೆ ದೇಹೇಂದ್ರಿಯಗಳನ್ನು ಅರ್ಪಿಸುತ್ತ ಅವುಗಳ ಮೇಲಿನ ಅಭಿಮಾನವನ್ನು ತ್ಯಾಗಮಾಡುವುದರಿಂದ ತ್ಯಾಗಾಂಗ (ತ್ಯಾಗಿ) ಎನಿಸುವನು. ಹಾಗೆಯೇ ಅವನು ಪ್ರಾಣಲಿಂಗದೊಡನೆ ಸಕಲಭೋಗ್ಯವಸ್ತುಗಳನ್ನು ಮಿತವಾಗಿ ಭೋಗಿಸುವುದರಿಂದ ಭೋಗಾಂಗ (ಭೋಗಿ) ಎನಿಸುವನು. ಹೀಗೆಯೇ ಭಾವಲಿಂಗದೊಡನೆ ಬೆರೆಯುವುದರಿಂದ ಅವನು ಯೋಗಾಂಗ (ಯೋಗಿ) ಎನಿಸುವನು. ಹೀಗೆ ಜೀವನು ತ್ಯಾಗದಿಂದಲೇ ಯೋಗಿಯಾಗಬೇಕಾಗಿದೆ. ತ್ಯಾಗವಿಲ್ಲದವನು ಯೋಗಾನಂದವನ್ನು ಅನುಭವಿಸಲಾರನು. ಈ ಬಗೆಯ ಯೋಗವನ್ನು ಶ್ವೇತಾಶ್ವತರಶ್ರುತಿಯು ಸಾಧಕರೆಲ್ಲರಿಗೂ ಉಪದೇಶಿಸಿದೆ. ಇದೇ ಶಿವಯೋಗವನ್ನೇ ವೀರಶೈವಸಂಪ್ರದಾಯವು ಒತ್ತಿ ಹೇಳಿದೆ. ಹೀಗೆ ಯೋಗಮಾರ್ಗವನ್ನು ತಿಳಿಸಿರುವುದರಿಂದ ಈ ಶ್ರುತಿಯು ವೀರಶೈವಸಂಪ್ರದಾಯಕ್ಕನುಗುಣವಾಗಿದೆ ಎಂಬುದು ವ್ಯಕ್ತವಾಗುತ್ತದೆ. ಈ ಬಗೆಯ ಅಂಗಲಿಂಗರೇ ಆರು ಇಂದ್ರಿಯಗಳಲ್ಲೂ ನೆಲಸಿ ಆಯಾ ಕಾಲದಲ್ಲಿ ಒದಗುವ ಸುಖದುಃಖಗಳನ್ನು ಆಗಲೇ ಅಂಗನು ಲಿಂಗಕ್ಕೆ ಭಕ್ತಿಯಿಂದ ಅರ್ಪಿಸುತ್ತಲೂ, ಲಿಂಗನು ಅದನ್ನು ವಾತ್ಸಲ್ಯದಿಂದ ಸ್ವೀಕರಿಸುತ್ತಲೂ ಇರುವುವೇ ಷಟ್ಸ್ಥಲೋಪಾಸನವೆನಿಸುತ್ತದೆ. ಇದೇ ಲೋಕವ್ಯವಹಾರವೆಂದು ಪ್ರಸಿದ್ಧವಾಗಿದೆ. ಜನರು ತಿಳಿಯಲಿ, ತಿಳಿಯದಿರಲಿ, ಲೋಕದಲ್ಲಿ ನಡೆಯುತ್ತಿರುವುದೆಲ್ಲವೂ ಷಟ್ಸ್ಥಲಾತ್ಮಕನಾದ ಶಿವನ ಲೀಲೆಯೇ ಆಗಿದೆ. ಜನರು ಕಂಡದ್ದು ಮುಟ್ಟಿದ್ದು ಕೇಳಿದ್ದು ರುಚಿಸಿದ್ದು ಮೂಸಿಸಿದ್ದು ಭಾವಿಸಿದ್ದು ಇದೆಲ್ಲವೂ ಪ್ರತಿಯೊಂದು ದೇಹದಲ್ಲೂ ಜೀವನು ಶಿವನಿಗೆ ಅರ್ಪಿಸುತ್ತಲೂ ಶಿವನು ಸ್ವೀಕರಿಸುತ್ತಲೂ ಇರುವುದೇ ಆಗಿದೆ. ಆದರೆ ಯಾರು ಇದನ್ನು ಅರಿತಿರುವರೋ ಅವರಿಗೆ ಮಾತ್ರ ಇದು ಕಾಯಕವೆನಿಸುವುದು. ಅರಿತವರಿಗೆ ಇದೆಲ್ಲವೂ ಯೋಗಮಾರ್ಗವೆನಿಸುವುದು, ಇದರಿಂದ ಅವರಿಗೆ ಶಿವನ ಪ್ರಸಾದವು ದೊರಕುತ್ತದೆ. ಯಾರು ದೇಹದಲ್ಲಿ ಲಿಂಗಾಂಗಗಳ ಬೆಸುಗೆಯನ್ನು ತಿಳಿದಿಲ್ಲವೋ ಅವರಿಗೆ ಇದೆಲ್ಲವೂ ಭೋಗಜೀವನವೆನಿಸುತ್ತದೆ. ಇದರಿಂದ ಅವರಿಗೆ ವಿಷಯಾಸಕ್ತಿಯು ಪಶುಭಾವನೆಯು ಬೆಳೆಯುತ್ತದೆ. ಹೀಗೆ ಮಾನವರು ಯೋಗದ ಮಹತ್ತ್ವವನ್ನೂ, ಆವಶ್ಯಕತೆಯನ್ನೂ ತಿಳಿಯಬೇಕಾದರೆ ಶ್ವೇತಾಶ್ವತರೋಪನಿಷತ್ತನ್ನು ಅವಶ್ಯವಾಗಿ ಓದಬೇಕೆಂಬ ಭಾವನೆಯನ್ನು ಮಹರ್ಷಿಯು ನಮಗೆ ಹುಟ್ಟಿಸಿರುವನು. ಇದನ್ನು ಯೋಗದರ್ಶನವೆಂದು ಕರೆಯುವ ಮಟ್ಟದಲ್ಲಿ ಯೋಗದ ಮಹತ್ತ್ವವನ್ನು ಈ ಶ್ರುತಿಯು ಎತ್ತಿಹಿಡಿದಿದೆ.

ಹೀಗೆ ಈ ಶ್ರುತಿಯು ಯೋಗವನ್ನು ಎತ್ತಿಹಿಡಿದು ಪತಂಜಲಿಯ ಅಷ್ಟಾಂಗಯೋಗದಪ್ರಕ್ರಿಯೆಗೆ ಆಶ್ರಯವನ್ನು ನೀಡಿರುವುದೆಂದು ಸ್ಪಷ್ಟಪಡುವುದಲ್ಲದೆ ಅದರ ಪರಿಣಾಮವೆನಿಸಿದ ಶಿವಯೋಗದ ಕಡೆಗೆ ತನ್ನ ಗಮನವನ್ನು ಕೇಂದ್ರೀಕರಿಸಿದೆ. ಇಂತಹ ಶಿವಯೋಗವನ್ನು ಶ್ರುತಿಯು ವಿವರಿಸಿ ಅದಕ್ಕೆ ಶಿವಜ್ಞಾನವೇ ಮುಖ್ಯವಾದ ಅವಲಂಬನವೆಂಬುದನ್ನು ಸ್ಪಷ್ಟಪಡಿಸಿದೆ. ದೇಹದೊಳಗೆ ಸಹಜವಾಗಿ ಶಿವಜೀವರು ಇಬ್ಬರೂ ನೆಲಸಿದ್ದು ಜೀವನು ದೇಹದಲ್ಲಿ ಅಭಿಮಾನಿಸಿಕೊಂಡಿರುವಾಗ ಅವನಿಗೆ ಅಲ್ಲಿಯೇ ಅವ್ಯಕ್ತವಾಗಿ ನೆಲಸಿರುವ ಶಿವನ ಜ್ಞಾನವೇ ಇಲ್ಲದಿದ್ದರೆ ಶಿವಯೋಗದ ವಾಸನೆಯೇ ಅಂಟಲಾರದು. ಶಿವನನ್ನು ತಿಳಿಯದೇ ಇದ್ದರೆ ಜೀವನು ತಾನೇ ಸ್ವತಂತ್ರಿಸಿ ಮೆರೆಯಲಾರಂಭಿಸುವುದು ಸಹಜ. ತನಗೆ ಶಿವನು ಪತಿ ಎಂಬುವನ್ನು ಜೀವನು ತಿಳಿದರೆಯೇ ಜೀವನಿಗೆ ಶಿವಯೋಗದ ಬಯಕೆ ಉಂಟಾದೀತು; ಮುಂದೆ ಅದನ್ನು ಸಾಧಿಸಲು ಅವನು ತ್ರಿವಿಧೋಪಾಸನವನ್ನು ಮಾಡಿಯಾನು. ಹಾಗೆ ಮಾಡಲು ಅವನಿಗೆ ಶಿವಜ್ಞಾನವೇ ಇಲ್ಲದಿದ್ದರೆ ಅವನು ಅಹಂಕಾರಮಮಕಾರಗಳಿಂದ ಮರೆಯುತ್ತ ಶಿವಯೋಗವನ್ನೇ ಗಮನಿಸಲಾರನು. ಆದ್ದರಿಂದಲೇ ಶ್ರುತಿಯು ಶಿವಯೋಗಕ್ಕೆ ಜ್ಞಾನದ ಅವಲಂಬನವನ್ನು ಒತ್ತಿ ಹೇಳಿದೆ. "ತಮೇವ ವಿದಿತ್ವಾಽತಿಮೃತ್ಯುಮೇತಿ ನಾನ್ಯಃ ಪಂಥಾ ವಿದ್ಯತೇಽಯನಾಯ" ಹೀಗೆ ಅನೇಕ ವಾಕ್ಯಗಳಲ್ಲಿ ಶಿವಜ್ಞಾನದಿಂದಲೇ ಜೀವನು ಉದ್ಧಾರವಾಗಬೇಕೆಂಬುದನ್ನು ಶ್ರುತಿಯು ತಿಳಿಸುತ್ತದೆ. ಶಿವನೇ ಜೀವನ ಬಂಧಮೋಕ್ಷಗಳಿಗೂ, ರಕ್ಷಣಕ್ಕೂ ಕಾರಣವೆನಿಸಿರುವನೆಂದೂ, ಶಿವನ ಪ್ರಕಾಶದಿಂದಲೇ ವಿಶ್ವವೆಲ್ಲವೂ ಶೋಭಿಸುತ್ತಿರುವುದೆಂದೂ, ಸೂರ್ಯನ ಪ್ರಕಾಶಕ್ಕೂ ಶಿವಪ್ರಕಾಶವೇ ಅವಲಂಬನವೆಂದೂ, ಶ್ರುತಿಯು ತಿಳಿಸಿ ಅವನೇ ಸಾಧಕರೆಲ್ಲರಿಗೂ ಆಶ್ರಯನಾಗಲರ್ಹನೆಂಬುದನ್ನು ದೃಢಪಡಿಸಿದೆ. ಹೀಗೆ ಎಲ್ಲರಲ್ಲೂ ಸಾಕ್ಷಿಯಾಗಿದ್ದರೂ ನಿರ್ಲಿಪ್ತನೂ ಉದಾಸೀನನೂ ಆಗಿ ಕೈವಲ್ಯಸ್ಥಿತಿಯಲ್ಲಿ ಆತ್ಮಾರಾಮನಾಗಿರುವ ಸ್ವಪ್ರಕಾಶ ಶಿವನನ್ನು ತೊರೆದರೆ ಯಾವ ಜೀವನು ತಾನೆ ಸ್ವತಂತ್ರನಾಗಿ ಬಾಳಿಯಾನು? ಮತ್ತು ಲೋಕದಲ್ಲಿ ವ್ಯವಹರಿಸಿಯಾನು? ಆದ್ದರಿಂದ ಜೀವನು ಯಾವಾಗಲೂ ಶಿವನನ್ನೇ ಅನುಸರಿಸಬೇಕೆಂದು ಶ್ರುತಿ ವಿಧಿಸಿದೆ. ಅವನಿಂದಲೇ ಇವನಿಗೆ ಪಾಶವು ತೊಲಗಬೇಕಾಗಿದೆ. ಹೀಗೆ ಒಳಗೂ ಹೊರಗೂ ಶಿವನನ್ನು ಅರ್ಚಿಸುವುದರಿಂದಲೇ ಸಾಧಕನು ಈ ದೇಹದಲ್ಲಿದ್ದರೂ ಅದಕ್ಕೆ ಅಂಟದಂತೆ ಕೈವಲ್ಯಾವಸ್ಥೆಯನ್ನು ಅನುಭವಿಸುವನು. ಈ ಸ್ಥಿತಿಯಲ್ಲಿ ಅವನಿಗೆ ಬೇರೆ ದೇಹವೇ ದೊರಕುವುದೆಂದು ಶ್ರುತಿಯು ತಿಳಿಸಿದೆ. ಇದನ್ನು ಶಿವಮಯವಾದ ಪ್ರಸಾದಕಾಯವೆಂದು ಅನುಭವಿಗಳು ಕರೆಯುತ್ತಾರೆ. ಇದರಿಂದ ಸಾಧಕನಿಗೆ ಬರುವ ಫಲವನ್ನು ವಿಶ್ವೈಶ್ವರ್ಯವೆಂದು ಶ್ರುತಿಯು ತಿಳಿಸಿದೆ. "ತಸ್ಯಾಭಿಧ್ಯಾನಾತ್ತೃತೀಯಂ ದೇಹಭೇದೇ ವಿಶ್ವೈಶ್ವರ್ಯಂ ಕೇವಲ ಆಪ್ತಕಾಮಃ" (1-11) ಹೀಗೆ ಶ್ರುತಿಯು ಸಾಧಕನಿಗೆ ದೊರಕುವ ಯೋಗದ ಫಲವನ್ನು ತಿಳಿಸಿದೆ. ಇದು ಅವನಿಗೆ ಮೂರನೆಯ ಫಲವೆನಿಸಿದೆ.

ಸರ್ವಪಾಶತ್ಯಾಗ ಮತ್ತು ಜನ್ಮಮೃತ್ಯುವಿಯೋಗ ಇವೆರಡು ಫಲಗಳ ಜೊತೆಗೆ ಮೂರನೆಯ ದೇಹದಲ್ಲಿ ವಿಶ್ವೈಶ್ವರ್ಯವೆಂಬ ಮೂರನೆಯ ಫಲವನ್ನು ಶ್ರುತಿ ತಿಳಿಸಿವೆ. ಇವೇಯೇ ಜೀವನಸ್ವಾತಂತ್ರ್ಯದ ಕೊನೆಯ ಹಂತ; ಪರಿಪೂರ್ಣತೆಯ ಶಿಖರ. ಇದನ್ನು ಎಲ್ಲರೂ ಸಾಧಿಸಬೇಕೆಂದೂ ಇದು ಪ್ರತಿಯೊಬ್ಬರಲ್ಲೂ ಅಡಗಿದೆ ಎಂದು ಇದನ್ನು ಪಡೆದಮೇಲೆ ಬೇರೆ ಏನನ್ನೂ ಪಡೆಯಬೇಕಾಗಿಲ್ಲವೆಂದೂ ಶ್ರುತಿಯು ತಿಳಿಸಿದೆ. ಮಾನವರೆಲ್ಲರೂ ಇದನ್ನು ಪಡೆದು ಅಮೃತರಾಗಲೆಂದು ಶ್ವೇತಾಶ್ವತರ ಮಹರ್ಷಿಯ ಬಯಕೆ. "ಶೃಣ್ವಂತು ವಿಶ್ವೇ ಅಮೃತಸ್ಯ ಪುತ್ರಾಃ" ಎಂದು ಮಹರ್ಷಿಯು ವಿಶಾಲಭಾವನೆಯಿಂದ ಸಾಧಕರೆಲ್ಲರನ್ನೂ ಕರೆದು ಅವರ ಗಮನವನ್ನು ಹೃದಯದಲ್ಲಿರುವ ಈಶ್ವರನಕಡೆಗೆ ತಿರುಗಿಸುತ್ತಾನೆ. ಸಾಧಕನು ಭೀಕರವಾದ ಸಂಸಾರಪ್ರವಾಹಗಳನ್ನು ಶಿವನೆಂಬ ದೋಣಿಯಿಂದಲೇ ದಾಟಬೇಕೆಂದು ಮಹರ್ಷಿಯು ಉಪದೇಶಿಸಿರುವುದು ಯುಕ್ತವೆನಿಸಿದೆ.

ಜೀವನ ಬಂಧಮೋಕ್ಷಗಳ ವ್ಯವಸ್ಥೆಯನ್ನು ಸುಗಮವಾದ ರೀತಿಯಲ್ಲಿ ಶ್ರುತಿಯು ಸ್ಪಷ್ಟಪಡಿಸಿದೆ. "ಅನೀಶಶ್ಚಾತ್ಮಾ ಬಧ್ಯತೇ ಭೋಕ್ತೃಭಾವಾತ್ ಜ್ಞಾತ್ವಾ ದೇವಂ ಮುಚ್ಯತೇ ಸರ್ವಪಾಶೈಃ" ಎಂಬ ಒಂದೇ ಮಂತ್ರದಲ್ಲಿ ಬಂಧಮೋಕ್ಷಗಳೆರಡಕ್ಕೂ ಕಾರಣವನ್ನು ಶ್ರುತಿಯು ತಿಳಿಸಿದೆ. "ಭೋಕ್ತೃಭಾವವೇ ಬಂಧದ ಕಾರಣ ಶಿವಜ್ಞಾನದಿಂದಲೇ ಅದರ ಬಿಡುಗಡೆಯಾಗುವುದು" ಹೀಗೆ ಸ್ಪಷ್ಟಪಡಿಸಿದ್ದರಿಂದ ಜೀವನು ಕರ್ಮಫಲವನ್ನು ಭೋಗಿಸುತ್ತ ಬದ್ಧನಾಗದೆ ಅದನ್ನು ಶಿವನಿಗೆ ಆಗಾಗಲೇ ಅರ್ಪಿಸುತ್ತ ಮುಕ್ತನಾಗುವ ವಿಧಾನವನ್ನು ಶ್ರುತಿಯು ಎಲ್ಲರಿಗೂ ಮನವರಿಕೆ ಮಾಡಿದಂತಾಗಿದೆ. ದೇಹದೊಳಗೆ ಜೀವನ ಕರ್ಮಗಳಿಗೆ ಸಾಕ್ಷಿಯಾಗಿ ಶಿವನಿರುವುದನ್ನು ಜೀವನು ತಿಳಿದು ಆಗಾಗಲೇ ಕರ್ಮಫಲಗಳನ್ನು ಶಿವನಿಗೆ ಅರ್ಪಿಸುತ್ತ ಬಂದರೆ ನಿತ್ಯ ಸುಖಿಯಾಗುವನು. ಹಾಗೆ ತಿಳಿಯದೆ ಎಲ್ಲವನ್ನು ತಾನೇ ಭೋಗಿಸತೊಡಗಿದ್ದರೆ ಶಿವದ್ರೋಹದ ಅಪರಾಧಕ್ಕೆ ಗುರಿಯಾಗಿ ಕಳ್ಳನೆನಿಸುವನು. ಇಂತವನಿಗೆ ಈ ದೇಹವೇ ಕಾರಾಗೃಹವಾಸವೆನಿಸಿರುವುದು ಸಹಜ. ಇದರಿಂದ ಬಿಡುಗಡೆಯಾಗಲು ಅವನಿಗೆ ಶಿವಜ್ಞಾನವೇ ದಿವ್ಯೌಷಧ. ಅವನು ಮಾಡುವ ಪ್ರತಿಯೊಂದು ಕರ್ಮವನ್ನು ಶಿವಸೇವೆ ಎಂದು ಶ್ರದ್ಧೆಯಿಂದ ನಡೆಸುವುದೇ ಇದಕ್ಕೆ ಅವನು ಆಚರಿಸುವ ಪಥ್ಯವಾಗಿದ್ದರೆ ಔಷಧವು ಬೇಗನೆ ಫಲವನ್ನು ಕೊಡಬಲ್ಲದು. ಶಿವಜ್ಞಾನವೆಂಬ ಔಷಧವು ಶಿವಸೇವೆ ಎಂಬ ಪಥ್ಯದಿಂದ ಭವಪಾಶವೆಂಬ ರೋಗವನ್ನು ಬೇಗನೆ ಪರಿಹರಿಸಬಲ್ಲದು; ವಿಶ್ವೈಶ್ವರ್ಯವೆಂಬ ಆರೋಗ್ಯವನ್ನು ದೊರಕಿಸಬಲ್ಲದು. ಇದೆಲ್ಲವೂ ತ್ರಿವಿಧೋಪಾಸನದಿಂದ ಅವನಿಗೆ ದೊರಕುವ ಶಿವನ ಪ್ರಸಾದವೆಂದು ಶ್ರುತಿಯು ಭಾವಿಸಿದೆ. ಇದರಿಂದ ಆರು ಇಂದ್ರಿಯಗಳಲ್ಲೂ ಶಿವನು ಆರುಬಗೆಯಾಗಿ ನೆಲಸಿರುವನೆಂಬ ಅರಿವುಂಟಾಗುವುದು. ಇದನ್ನೇ ಷಟ್ಸ್ಥಲೋಪಾಸನವೆಂದು ಕರೆಯಲಾಗಿದೆ. ಜ್ಞಾನಕ್ರಿಯೆಗಳ ಸಮನ್ವಯದೃಷ್ಟಿಯೇ ಈ ಷಟ್ಸ್ಥಲೋಪಾಸನವೆನಿಸಿದೆ. ಇದು ವೀರ

ಶೈವನ ನಿತ್ಯಜೀವನದ ಉಸಿರು. ಇದನ್ನು ತಿಳಿದು ಆಚರಿಸುವವರೆಲ್ಲರೂ ವೀರ ಶೈವರೇ; ಅಮೃತಪುತ್ರರೇ. ಹೀಗೆ ಎಲ್ಲರೂ ಆಗಲೆಂಬುದೇ ಶ್ವೇತಾಶ್ವತರಮಹ ರ್ಷಿಯ ಹಿರಿಯ ಆಶೆ. ಇವೆಲ್ಲಕ್ಕೂ ಮೂಲವೇ ಆತ್ಮವಿಶ್ವಾಸ. ಇದಿಲ್ಲದವನೇ ರೋಗಿ; ದುಃಖಿ; ಕಪಟಿ. ಇಂತವನು ಭೂಮಿಗೆ ಭಾರವೆನಿಸುವನು. "ಕರಿಯು ಕನ್ನಡಿಯೊಳಗೆ ಅಡಗಿದಂತೆ ದೇವನು ನಮ್ಮೊಳಗೆ ನೆಲಸಿರುವಾಗ ನಾವು ಏಕೆ ಬಡವ ರಾದೇವು? ರೋಗಿಗಳಾದೇವು?" ಎಂದು ತಿಳಿದು ನಂಬಿದವನಿಗೆ ಭಯಶೋಕ ಮೋಹಗಳು ಹೇಗೆ ಬಂದಾವು? ಇಂತಹ ದಿವ್ಯಸಂದೇಶವನ್ನು ಶ್ರುತಿಯು ಜಗತ್ತಿಗೆ ಸಾರುತ್ತಿರುವುದರಿಂದ ಈ ವಿಶಾಲಭಾವನೆಯ ಹಿನ್ನೆಲೆಯನ್ನು ಎಲ್ಲರೂ ಅರಿಯ ಬೇಕಾಗಿದೆ. ಇದಕ್ಕೆ ಶ್ರುತಿಯಲ್ಲಿ ಹೇಳಿರುವ ತ್ರಿವಿಧೋಪಾಸನವೇ ದಿವ್ಯಸಂಜೀವಿನಿ ಎನಿಸಿದೆ. ಹೃದಯದಲ್ಲಿರುವ ಶಿವನನ್ನು ತಿಳಿದು ಅವನಿಗಾಗಿ ಎಲ್ಲ ವ್ಯವಹಾರ ಗಳನ್ನು ನಡೆಸುವುದೇ ವೀರಶೈವಧರ್ಮದ ಷಟ್ಸ್ಥಲೋಪಾಸನಮಾರ್ಗವೆನಿಸಿದೆ. ಇದನ್ನು ಹಿಂದೆ ಬ್ರಹ್ಮವಾದಿಗಳು ಮನಗಂಡಿದ್ದರು. ಶಿವ ಜೀವರು ದೇಹದ ಆರು ಇಂದ್ರಿಯಗಳಲ್ಲೂ ಸಹಜವಾಗಿ ನೆಲಸಿ ವ್ಯವಹರಿಸುತ್ತಿರುವುದನ್ನೇ ಆ ಜ್ಞಾನಿಗಳು ಷಟ್ಸ್ಥಲೋಪಾಸನವೆಂದು ಕರೆದಿರುವರು. ಇದ್ದದ್ದನ್ನು ಇದ್ದ ಹಾಗೆ ಭಾವಿಸಿ ತಿಳಿದು ಆಚರಿಸುವವನೇ ಬಾಳಿನ ರಹಸ್ಯವನ್ನು ಮನಗಾಣುವನು. ಅವನೇ ನಿತ್ಯ ಸುಖಿ ಎನಿಸುವನು. ಎಲ್ಲರೂ ಹೀಗೆ ಆಗಲು ಪ್ರಯತ್ನಿಸಲೆಂಬುದೇ ಶ್ರುತಿಯ ದಿವ್ಯೋಪದೇಶ. ಇದನ್ನು ನಿರಂತರಸಾಧನದಿಂದ ಬಾಳಿನಲ್ಲಿ ಅಳವಡಿಸಿಕೊಳ್ಳಬೇಕು.

ಪ್ರಪಂಚದ ಜನರು ಇಂದ್ರಿಯಗಳಿಂದ ಬರುವ ಸುಖ ದುಃಖಗಳನ್ನು ಸ್ವಾರ್ಥ ದೃಷ್ಟಿಯಿಂದ ಸ್ವೀಕರಿಸಿ ಭೋಗಿಸುವರು. ಶಿವಜ್ಞಾನಿಯಾದರೋ ಅವನ್ನು ಶಿವನ ಪ್ರಸಾದವೆಂದು ಅನುಭವಿಸುವನು. ಇಂತಹ ಪ್ರಸಾದಜೀವಿಯು ಇಲ್ಲಿಯೇ ಎಲ್ಲರಂತೆ ಇದೇ ದೇಹದಲ್ಲಿ ಬಾಳುತ್ತಿದ್ದರೂ ಎರಡನೆಯ ಜನ್ಮವನ್ನೂ ಮತ್ತು ದೇಹವನ್ನೂ ಪಡೆಯುವನು. ಅವನು ಎಲ್ಲರಂತೆ ಉಂಡು ತಿಂದು ಮಲಗಿ ಕಾಲವನ್ನು ಕಳೆಯು ತ್ತಿದ್ದರೂ ಅವನ ಬಾಳಿನ ರೀತಿಯೇ ಬೇರೆಯಾಗಿರುತ್ತದೆ. ಇದೇ ಅಮೃತಜೀವನ ಇಂತಹ ದಿವ್ಯಜೀವಿಗೆ ಆಕಾಶವೇ ಹೊದಿಕೆಯಾಗುವುದು. ಯಾರಿಗೆ ಚರ್ಮವು ಹೊದಿಕೆಯೋ ಅವನೇ ಬಾಳಿನಲ್ಲಿ ನರಳುವನು; ಆದರೆ ಆಕಾಶವನ್ನೇ ಹೊದ್ದು ಕೊಂಡಿರುವವನಿಗೆ ದುಃಖವೇ ಇರುವುದಿಲ್ಲ. ರೋಗ ರುಜಿನಗಳೆಲ್ಲವೂ ಅವನಿಗೆ ಶಿವನ ಪ್ರಸಾದವೇ ಆಗತೊಡಗುವುವು. ಪ್ರಸಾದಿಗೆ ದುಃಖದ ವಾಸನೆಯೇ ಇರುವು ದಿಲ್ಲ. ಹೃದಯದಲ್ಲಿ ಸಂಶಯಕ್ಕೆಡೆಯಿಲ್ಲದಂತಿದ್ದು, ಕರ್ಮಗಳನ್ನು ಫಲಾಪೇಕ್ಷೆ ಯಿಲ್ಲದೆ, ವೈಯಕ್ತಿಕಭಾವನೆಯಿಲ್ಲದೆ ಈಶ್ವರನ ಸೇವೆ ಎಂದು ನಡೆಸುತ್ತ ಬಂದರೆ ಎಲ್ಲರೂ ಅಮೃತರಾಗಲು ಸಾಧ್ಯವಿದೆ ಎಂಬುದನ್ನು ಜಗತ್ತಿಗೆ ಸಾರುವುದೇ ಶ್ವೇತಾಶ್ವ ತರೋಪನಿಷತ್ತಿನ ದಿವ್ಯೋಪದೇಶವೆನಿಸಿದೆ. ತಾಯ್ತಂದೆಗಳಿಂದ ಪಡೆದ ಜನ್ಮವು ನಮ್ಮನ್ನು ಭೋಗದ ಕಡೆಗೆ ಒಯ್ದರೆ ಶ್ರುತಿಯು ನಮ್ಮ ಗಮನವನ್ನು ದಿವ್ಯಜ್ಞಾನಿ

ಯಾದ ಗುರುವಿನ ಕಡೆಗೆ ಸೆಳೆದು ದೇಹದೊಳಗೆ ನೆಲಸಿರುವ ಶಿವನ ಪರಿಚಯವನ್ನು ಮಾಡಿಸಿಕೊಟ್ಟು ಅವನ ಅನುಭವದಿಂದ ನಮಗೆ ಬಾಳಿನಲ್ಲಿ ಹೊಸಬೆಳಕನ್ನು ದೊರಕಿಸಲಿದೆ. ಇದೇ ನಮಗೆ ಈಗ ಆಗಬೇಕಾಗಿರುವ ಶಕ್ತಿವಿಕಾಸ. ದೇಹವೆಂಬ ಸೆರೆಮನೆಯ ವಾಸದಿಂದ ನಮ್ಮ ಶಕ್ತಿಯು ಸಂಕೋಚಗೊಂಡಿದೆ. ಇದರಿಂದ ನಮ್ಮಲ್ಲಿ ಸ್ವಾರ್ಥತೆ, ವ್ಯಾಮೋಹ, ಅಹಂಕಾರಗಳು ಬೆಳೆದು ತಾಂಡವವಾಡುತ್ತಿವೆ. ಇವು ತೊಲಗಿ ನಮ್ಮ ಇಚ್ಛಾ ಜ್ಞಾನ ಕ್ರಿಯಾಶಕ್ತಿಗಳು ವಿಕಾಸವಾಗಬೇಕಾಗಿವೆ. ನಮ್ಮ ಇಚ್ಛೆ ಸ್ವಾರ್ಥತೆಯ ಕಿಲುಬನ್ನು ತೊರೆದು ವಿಶಾಲವಾಗಬೇಕಾಗಿದೆ. ನಾಡಿನ ಹಿತದ ಬಯಕೆಯೇ ನಮ್ಮ ಗುರಿಯಾಗಬೇಕು. ವಿಶ್ವವನ್ನು ಆತ್ಮೀಯತೆಯಿಂದ ಪ್ರೀತಿಸುವಷ್ಟರ ಮಟ್ಟಕ್ಕೆ ಜ್ಞಾನ ಶಕ್ತಿಯು ಬೆಳೆಯಬೇಕು. ಕರ್ತವ್ಯನಿಷ್ಠೆಯಿಂದ ಸರ್ವರ ಹಿತವನ್ನು ಸಾಧಿಸುವಷ್ಟರ ಮಟ್ಟಕ್ಕೆ ಕ್ರಿಯಾಶಕ್ತಿ ನಮ್ಮಲ್ಲಿ ವ್ಯಾಪಿಸಬೇಕು. ಶಕ್ತಿವಿಕಾಸವೇ ದಿವ್ಯಜೀವನವೆನಿಸುತ್ತದೆ. ಹೀಗೆ ಬಾಳುತ್ತ ಸಾಧಕರೆಲ್ಲರೂ ಅಮೃತಪುತ್ರರಾಗಲೆಂಬುದೇ ಶ್ವೇತಾಶ್ವತರಮಹರ್ಷಿಯ ಬಯಕೆ. ವೀರಶೈವ ಧರ್ಮವೂ ಮಾನವರಿಗೆ ಇದನ್ನೇ ಬೋಧಿಸುತ್ತಿದೆ. "ಸರ್ವಜೀವರಿಗೆ ಲೇಸನ್ನೇ ಬಯಸುವುದು ಬಾಳಿನ ಗುರಿ" ಎಂದು ವೀರಶೈವಧರ್ಮವು ಜಗತ್ತಿಗೆ ಸಾರುತ್ತಿದೆ. ಹೀಗೆ ಶ್ವೇತಾಶ್ವತರಶ್ರುತಿಯು ವೀರಶೈವದರ್ಶನಕ್ಕೆ ಯುಕ್ತವಾಗಿ ಹೊಂದುವ ಪ್ರಯುಕ್ತ ಇದನ್ನು ಅದಕ್ಕನುಗುಣವಾಗಿ ಇಲ್ಲಿ ವಿವರಿಸಲಾಗಿದೆ. ಇದನ್ನು ಸಾಧಕರೆಲ್ಲರೂ ಮನಗಂಡು ಅಮೃತಪುತ್ರರಾಗಲೆಂದು ಆಶಿಸಲಾಗಿದೆ.

ಈ ರೀತಿಯಲ್ಲಿ ಭಾಷ್ಯವನ್ನು ಬರೆದು ಅನುವಾದದೊಡನೆ ಈಗ ಪ್ರಕಟಿಸಿದ್ದರೂ ವೀರಶೈವರಿಗಾಗಲೀ, ಇತರ ಸಾಧಕರಿಗಾಗಲೀ ಇದರಿಂದ ಪ್ರಯೋಜನವೇನೆಂಬ ಪ್ರಶ್ನೆಯನ್ನು ಈಗ ಪರಿಶೀಲಿಸಬೇಕಾಗಿದೆ. ವೀರಶೈವರು ತಮ್ಮ ಸಿದ್ಧಾಂತ ತತ್ತ್ವವು ಶಕ್ತಿವಿಶಿಷ್ಟಾದ್ವೈತವೋ ಅಥವಾ ಶಿವಾದ್ವೈತವೋ ಎಂಬ ಆಲೋಚನೆಯಲ್ಲಿಯೇ ನಿರತರಾಗಿರುವರು. ಅವರಿಗೆ ಈ ಭಾಷ್ಯವನ್ನು ನೋಡುವ ಇಚ್ಛೆಯೇ ಹುಟ್ಟುವುದಿಲ್ಲ. ಬೇರೆಯವರು ವೀರಶೈವಭಾಷ್ಯವನ್ನು ಏಕೆ ನೋಡಬೇಕೆಂದು ಭಾವಿಸಿ ಉದಾಸೀನರಾಗುವರು. ಇಂತಹ ಪರಿಸ್ಥಿತಿಯಲ್ಲಿ ಈ ಭಾಷ್ಯವೇಕೆ ಬೇಕು ಎಂಬ ಸಂಶಯವು ತಲೆದೋರುವುದು ಸಹಜ. ಆದರೆ ಈ ಸಂಶಯವನ್ನು ಶ್ರುತಿಯೇ ಪರಿಹರಿಸಿದೆ. "ಯಾರಿಗೆ ದೇವನಲ್ಲಿಯೂ, ಅವನ ಸ್ವರೂಪವನ್ನು ತಿಳಿದ ಗುರುವಿನಲ್ಲಿಯೂ ಜೀವಂತ ವಿಶ್ವಾಸವಿದೆಯೋ, ಅವರನ್ನು ಆಶ್ರಯಿಸಿ ತನ್ನ ಪಾಶವನ್ನು ನೀಗಿಕೊಳ್ಳಬೇಕೆಂಬ ಇಚ್ಛೆ ಇದೆಯೋ ಅಂತವನಿಗೆ ಮಾತ್ರವೇ ಈ ಬಗೆಯ ಉದಾತ್ತ ತತ್ತ್ವಗಳು ಅರ್ಥವಾಗುತ್ತವೆ" ಎಂದು ಶ್ರುತಿಯೇ ತಿಳಿಸಿದೆ. ದೇಹದೊಳಗೆ ಶಿವಜೀವರು ನೆಲಸಿ ವ್ಯವಹರಿಸುತ್ತಿರುವುವಂತೂ ಸಹಜ. ಇದನ್ನು ತಿಳಿಯುವುದು ಪ್ರತಿಯೊಬ್ಬ ಸಾಧಕನ ಕರ್ತವ್ಯ. ಇದನ್ನು ತಿಳಿಯಲು ವೀರಶೈವರು, ಇತರರು ಎಂಬ ಭೇದಭಾವನೆಯೇ ಇಲ್ಲ. ಅವರವರ ದೇಹದಲ್ಲಿ ನೆಲಸಿರುವ ಶಿವತತ್ತ್ವವನ್ನು

ತಿಳಿಯಲು ಎಲ್ಲರಿಗೂ ಅಧಿಕಾರವಿದೆ. ಆ ಶಿವನು ಸರ್ವವ್ಯಾಪಕನೆನಿಸಿ, ಜೀವನು ಪರಿಮಿತನೂ ಸಂಕುಚಿತನೂ ಆಗಿರುವುದನ್ನು ತಿಳಿಯಲು ಯಾರಿಗೆ ಅವಕಾಶವಿಲ್ಲ. ಹೀಗೆ ಶಿವನು ಶಕ್ತಿವಿಶಿಷ್ಟನಾಗಿರುವಂತೆಯೇ ಜೀವನೂ ಶಕ್ತಿವಿಶಿಷ್ಟನೇ ಆಗಿರುವ ನೆಂಬ ಅಂಶವು ಎಲ್ಲರಿಗೂ ತಿಳಿದದ್ದೇ ಆಗಿದೆ. ಶಿವನ ಶಕ್ತಿ ಚಿದ್ರೂಪವಾದರೆ ಜೀವನ ಶಕ್ತಿ ಚಿತ್ತ ಅಥವಾ ಪ್ರಕೃತಿ ಅಥವಾ ಮಾಯೆ ಎನಿಸಿದೆ. ಚಿಚ್ಛಕ್ತಿ ಅಥವಾ ಪರಾ ಶಕ್ತಿಯು ಸಚ್ಚಿದಾನಂದವೆನಿಸಿದ್ದರೆ ಚಿತ್ತಶಕ್ತಿಯು ಸತ್ತ್ವರಜಸ್ತಮೋಗುಣ ವೆನಿಸಿದೆ. ಶಿವ ಜೀವರಿಬ್ಬರೂ ಚೇತನರೇ ಅವರೂ ಶಕ್ತಿವಿಶಿಷ್ಟರಾದ್ದರಿಂದಲೇ ಅವರಿಗೆ ಭೇದವು ಸಹಜವಾಗಿ ನೆಲಸಿದೆ. ಅವರ ಭೇದವು ಕಲ್ಪಿತವಲ್ಲ; ಆಕಸ್ಮಿಕ ವಲ್ಲ; ಅದರೆ ಪ್ರಾಕೃತಿಕವಾದದ್ದು; ಶಕ್ತಿಯಿಂದ ಸಹಜವಾಗಿ ಬಂದಿರತಕ್ಕದ್ದು. ಶಿವನ ಚಿತ್ಪ್ರಕೃತಿಯೇ ಜೀವನ ಚಿತ್ತಪ್ರಕೃತಿ ಎನಿಸಿದೆ. ಹೀಗೆ ಇಬ್ಬರಿಗೂ ಭೇದ ವಿರುವುದರಿಂದಲೇ ಆ ಭೇದವನ್ನು ನಿರಂತರೋಪಾಸನದಿಂದ ತೊಲಗಿಸಿ ಅವರಿಗೆ ಯೋಗವನ್ನು ಶ್ರುತಿಯು ಬೋಧಿಸಿದೆ. ತ್ರಿವಿಧೋಪಾಸನದಿಂದ ಭೇದವು ಕ್ರಮ ವಾಗಿ ತೊಲಗಿ ಅಭೇದವು ಸಂಘಟಿಸುತ್ತದೆ. ಇದನ್ನೇ ಶ್ರುತಿಯಲ್ಲಿ ವಿಶ್ವೈಶ್ವರ್ಯ ವೆಂದು ಕರೆಯಲಾಗಿದೆ. ಜೀವನು ಸಂಸಾರದಶೆಯಲ್ಲಿ ಶಿವನ ಚೇತನಾಂಶವೇ ಹೊರತು ಶಿವನೇ ಅಲ್ಲ. ಅವನು ಶಿವನೇ ಆಗಿದ್ದಿದ್ದರೆ ಅವನಿಗೆ ಶಿವನ ಉಪಾಸನವೇ ಬೇಕಿರಲಿಲ್ಲ. ಆದರೂ ಅವನು ಶಿವಾಂಶನೆಂಬುದನ್ನು ಗುರುವಿನಿಂದ ತಿಳಿದು ತನ್ನೊ ಳಗೆ ತನಗಾಗಿ ನೆಲಸಿರುವ ಶಿವನನ್ನು ತಿಳಿಯಲು ಪ್ರಯತ್ನಿಸುವನು. ಈ ಪ್ರಯ ತ್ನವೇ ತ್ರಿವಿಧೋಪಾಸನ ಮತ್ತು ಷಟ್ಸ್ಥಲ್ಲಲೀಲೆ. ಹೀಗೆ ಜೀವನು ಶಿವನಿಂದ ಸಹಜವಾಗಿ ಭಿನ್ನನಾಗಿದ್ದರೂ ಭಕ್ತಿಯ ಪ್ರಭಾವದಿಂದ ಶಿವನಿಗೆ ಪ್ರಿಯನಾಗ ತೊಡಗುವನು. ಜೀವನನ್ನು ಮಾಯೆ ಎನಿಸಿದ ಚಿತ್ತಶಕ್ತಿಯ ಸಂಕೋಲೆಯಿಂದ ಬಿಡಿಸಲು ಚಿಚ್ಛಕ್ತಿಯೇ ಭಕ್ತಿ ಎನಿಸಿ ಅವನಿಗೆ ನೆರವಾಗುವುದು. ಇದು ಅವನಿಗೆ ಪಶ್ಚಾತ್ತಾಪದಿಂದಲೂ, ಶಿವಾನುಗ್ರಹದಿಂದಲೂ ದೊರಕುವ ದಿವ್ಯಪ್ರಸಾದ. ಇದರ ಪ್ರಭಾವದಿಂದ ಅವನು ಆತ್ಮಶಕ್ತಿಯನ್ನು ವಿಕಾಸಗೊಳಿಸಿಕೊಳ್ಳಬೇಕಾಗಿದೆ.

ಹೀಗೆ ಜೀವನಿಗೆ ಚಿತ್ತಶಕ್ಥಿಯು ಚಿತ್‌ಶಕ್ತಿಯಾಗಿ ಪರಿಣಮಿಸಿದಲ್ಲದೆ ಅವನು ಶಿವನಾಗಲಿಕ್ಕೆ ಸಾಧ್ಯವಿಲ್ಲವಾಗಿದೆ. ಸಂಸಾರದಶೆಯಲ್ಲಿ ಶಕ್ತಿವೈಶಿಷ್ಟ್ಯದಿಂದ ಸಹಜ ವಾಗಿದ್ದ ಭೇದವು ತೊಲಗಿ ಚಿತ್ತವೇ ಚಿದ್ರೂಪವಾಗಿ ಪರಿಣಮಿಸಿದಾಗ ಜೀವನು ಶಿವ ನಾಗಲಿಕ್ಕೆ ಯಾವ ಅಡ್ಡಿಯೂ ಇಲ್ಲ. ಮಾನವೀಪ್ರಕೃತಿಯು ದೈವೀಪ್ರಕೃತಿಯಾಗಿ ಪರಿಣಮಿಸಿದಲ್ಲದೆ ಜೀವನು ಶಿವನಾಗಲಿಕ್ಕೆ ಶಕ್ಯವಿಲ್ಲ. ಸತ್ತ್ವಗುಣವು ಸದ್ರೂಪ ವಾಗಿಯೂ, ರಜೋಗುಣವು ಚಿದ್ರೂಪವಾಗಿಯೂ, ತಮೋಗುಣವು ಆನಂದರೂಪ ವಾಗಿಯೂ ಪರಿಣಮಿಸಬೇಕಾಗಿದೆ. ಆಗಲೇ ಅವನಿಗೆ ಇಚ್ಛಾಜ್ಞಾನಕ್ರಿಯಾಶಕ್ತಿಗಳು ವಿಕಾಸಗೊಳ್ಳಲಿವೆ. ಇವು ಮೂರೂ ಸಂಕುಚಿತಗಳಾಗಿ ಆಣವ, ಮಾಯೀಯ, ಕಾರ್ಮಿಕವೆಂಬ ಮಲಗಳಾಗಿರುವಾಗ ಜೀವನನ್ನು ಯಾರು ತಾನೇ ಶಿವನೆಂದು ಕರೆ

ವಾರು? 'ಮಲಾವೃತಃ ಸಂಸಾರೀ' ಎಂದು ಶಿವಸೂತ್ರವು ಜೀವನನ್ನು ಬದ್ಧಪಶು ವೆಂದು ಕರೆದಿದೆ. ಇವನಿಗೆ ಪಾಶವಿಮೋಚನೆಯಾಗದ ಹೊರತು ಇವನು ಬುದ್ಧನಾಗ ಲಾರನು. ಇವನಿಗೆ ಶಿವಯೋಗವು ಲಭಿಸಬೇಕಾದರೆ ಮೊದಲು ಪಾಶವು ತೊಲಗಿ ಗುಣಗಳ ವಿಕಾಸವಾಗಬೇಕಾಗಿದೆ. ಅವನಿಗೆ ಬದ್ಧಾವಸ್ಥೆಯಲ್ಲಿ ಚಿತ್ತಶಕ್ತಿಯೂ, ಬುದ್ಧಾವಸ್ಥೆಯಲ್ಲಿ ಚಿಚ್ಛಕ್ತಿಯೂ ಸಂಬಂಧಪಟ್ಟಿರುವುದರಿಂದ ಸಂಸಾರ ಮೋಕ್ಷ ಗಳೆಂಬ ಎರಡು ಅವಸ್ಥೆಗಳಲ್ಲೂ ಶಕ್ತಿವೈಶಿಷ್ಟ್ಯವಿದ್ದೇ ಇದೆ. ಆದರೆ ಹಿಂದಿನ ಪ್ರಕೃತಿ ಬುದ್ಧಾವಸ್ಥೆಯಲ್ಲಿ ಸತ್ಪರಿಣಾಮವನ್ನು ಹೊಂದಿರುವುದರಿಂದ ಅವನ ಇಚ್ಛಾಜ್ಞಾನ ಕ್ರಿಯೆಗಳು ವಿಶಾಲವೂ ವ್ಯಾಪಕವೂ ಆಗುತ್ತವೆ. ಜೀವನಿಗೆ ಶಿವನೊಡನೆ ಅದ್ವೈತವು ಶಕ್ತಿವಿಕಾಸದಿಂದಲೇ ಸಂಭವಿಸಬೇಕಾಗಿದೆ. ಹೀಗೆ ಶಕ್ತಿವಿಶಿಷ್ಟಾದ್ವೈತವೆಂಬ ಪದವು ಶಿವಯೋಗವೆಂಬ ಅರ್ಥವನ್ನೇ ವಿಶದಪಡಿಸಲಿದೆ. ಇಂತಹ ಸ್ಥಿತಿಯಲ್ಲಿ "ನಮ್ಮ ತತ್ತ್ವವು ಶಿವಾದ್ವೈತವೋ, ಶಕ್ತಿವಿಶಿಷ್ಟಾದ್ವೈತವೋ" ಎಂಬ ಆಲೋಚನೆಯಲ್ಲಿ ಮುಗ್ನರಾಗುವುದು ಅಷ್ಟು ಯುಕ್ತವಲ್ಲ. ಶಿವನೊಡನೆ ಜೀವನಿಗೆ ಸಾಮರಸ್ಯವೇನೋ ಎಲ್ಲರಿಗೂ ಇಷ್ಟವೇ ಆಗಿದೆ. ಅದರಲ್ಲಿ ಯಾರಿಗೂ ಭಿನ್ನಾಭಿಪ್ರಾಯವಿಲ್ಲ. ಆದರೆ ಬದ್ಧಾವಸ್ಥೆಯಲ್ಲೂ, ಬುದ್ಧಾವಸ್ಥೆಯಲ್ಲೂ ಶಕ್ತಿವೈಶಿಷ್ಟ್ಯವೇ ಇದ್ದು ಆ ಶಕ್ತಿಯಲ್ಲಿ ಭೇದವು ಸಹಜವಾಗಿ ಇರುವುದರಿಂದ ಅದನ್ನು ಕ್ರಮವಾಗಿ ತೊಲಗಿಸಿ ಅಭೇದಾನಂದ ವನ್ನು ತ್ರಿವಿಧೋಪಾಸನವು ಶಿವಜ್ಞಾನದ ಅವಲಂಬನದ ಮೇಲೆ ದೊರಕಿಸಲಿದೆ ಎಂಬು ದನ್ನು ಸಾಧಕರೆಲ್ಲರೂ ಮನಗಂಡರೆ ಸಾಕಾಗಿದೆ. ಇದುವೆ ನಿಜವಾದ ಆಧ್ಯಾತ್ಮವಿಕಾಸ. ಇದರಲ್ಲಿ ಲಕ್ಷ್ಯವಿಟ್ಟವರು ತತ್ತ್ವದ ಹೆಸರಿನಲ್ಲಿ ವಿವಾದವನ್ನೇ ಮಾಡುವುದಿಲ್ಲ. ಶಿವಾ ದ್ವೈತವೇ ಆಧ್ಯಾತ್ಮವಿಚಾರದ ಪರಿಣಾಮವಾದರೂ ಅದು ಸಾಧನಮಾರ್ಗವನ್ನು ತಿಳಿಸುವುದಿಲ್ಲ. ಬದ್ಧಾವಸ್ಥೆಯ ಚಿತ್ತಶಕ್ತಿವೈಶಿಷ್ಟ್ಯವನ್ನು ತೊಲಗಿಸಿಕೊಂಡು ಬುದ್ಧಾ ವಸ್ಥೆಯ ಚಿಚ್ಛಕ್ತಿವೈಶಿಷ್ಟ್ಯವನ್ನು ಸಾಧಿಸಿದಲ್ಲದೆ ಶಿವಾದ್ವೈತವು ಸಿದ್ಧಿಸುವಂತಿಲ್ಲ. ಶಕ್ತಿವಿಶಿಷ್ಟಾದ್ವೈತದಲ್ಲಿ ಈ ಶಿವಾದ್ವೈತವು ಸೇರಿಕೊಂಡಿದ್ದರೂ ಶಿವಾದ್ವೈತದಲ್ಲಿ ಶಕ್ತಿವಿಶಿಷ್ಟಾದ್ವೈತವು ಸೇರಿಲ್ಲ. ಶಿವನೆಂದರೆ ಶಕ್ತಿವಿಶಿಷ್ಟದೇವನೆಂದೇ ಅರ್ಥವಾಗುವು ದಿಲ್ಲ. ನಿರ್ವಿಶೇಷಬ್ರಹ್ಮಕ್ಕೂ ಶಿವಪದವು ಅನ್ವಯಿಸುತ್ತದೆ. ಆದರೆ ಅದು ಈ ಶ್ರುತಿಗೂ ವೀರಶೈವದರ್ಶನಕ್ಕೂ ಇಷ್ಟವಿಲ್ಲ. ಆದ್ದರಿಂದ ಶಿವಾದ್ವೈತವೆಂದರೆ ಅದ್ವೈತಮತದ ಬ್ರಹ್ಮಾದ್ವೈತದಲ್ಲಿ ಕೊನೆಗಾಣುವುದು. ಅದು ಸಿದ್ಧಾಂತಕ್ಕೆ ವಿರುದ್ಧವಾದೀತು. ಹೀಗೆ ಶಕ್ತಿವಿಶಿಷ್ಟಾದ್ವೈತವು ಶಕ್ತಿವಿಶಿಷ್ಟಾದ್ವೈತದ ಮೂಲಕ ಸಹಜವಾಗಿ ಬಂದಿರುವ ಶಿವ ಜೀವಭೇದವನ್ನು ತೊಲಗಿಸಿ ಶಕ್ತಿವಿಕಾಸದ ಮೂಲಕ ಜೀವನಿಗೆ ಶಿವಾಭೇದದ ದಿವ್ಯಾ ನಂದವನ್ನು ದೊರಕಿಸುವುದರಿಂದ ಸಾಧನ ಮತ್ತು ಸಿದ್ಧಾಂತಗಳೆರಡನ್ನೂ ತಿಳಿ ಸುತ್ತಲಿದೆ. ಹೀಗೆ ಶಿವಾದ್ವೈತವೂ ಶಕ್ತಿವಿಶಿಷ್ಟಾದ್ವೈತದಲ್ಲಿಯೇ ಸೇರಿರುವುದರಿಂದ ಅವೆರಡಕ್ಕೂ ಭೇದವೇನೆಂಬ ಜಿಜ್ಞಾಸೆಗೆ ಸಾಧಕರು ಪ್ರವೇಶಿಸದೆ ಆ ಜಿಜ್ಞಾಸೆಯನ್ನು ಹುಟ್ಟಿಸಿರುವ ಶಕ್ತಿಸಂಕೋಚದ ವ್ಯಾಮೋಹದೃಷ್ಟಿಯನ್ನು ತೊಲಗಿಸಲಿಕ್ಕಾಗಿ

ನಿರಂತರವೂ ದೇಹದಲ್ಲಿ ನಡೆಯುತ್ತಿರುವ ಷಟ್ಸ್ಥಲೋಪಾಸನದ ಕಡೆಗೆ ಗಮನವನ್ನು ಕೊಡುವುದು ಮೇಲು. ಇದರಿಂದ ಆತ್ಮಕಲ್ಯಾಣವಷ್ಟೇ ಅಲ್ಲದೆ ಲೋಕಕಲ್ಯಾಣವೂ ಆಗಲಿರುವುದು. ಶಕ್ತಿವಿಶಿಷ್ಟಾದ್ವೈತದಲ್ಲಿ ಶಿವಾದ್ವೈತವೂ ಸೇರಿರುವುದರಿಂದ ಆ ಬಗ್ಗೆ ಯಾರಿಗೂ ವಿವಾದವಿಲ್ಲ. ಆದರೆ ಮಾನವೀಪ್ರಕೃತಿಯು ಕ್ರಮವಾಗಿ ಬದಲಾವಣೆ ಯಾಗಬೇಕಾದ್ದರಿಂದಲೂ, ಕೇವಲ ಶಿವಜ್ಞಾನದಿಂದಲೇ ಅದು ಆಗದಿರುವುದರಿಂದಲೂ, ತ್ರಿವಿಧೋಪಾಸನವನ್ನು ಜೀವನು ಅವಶ್ಯವಾಗಿ ನಡೆಸಲೇಬೇಕಾಗಿರುವುದರಿಂದಲೂ ಶಕ್ತಿವಿಶಿಷ್ಟಾದ್ವೈತವು ಮಾನವಕಲ್ಯಾಣವನ್ನು ಯುಕ್ತರೀತಿಯಲ್ಲಿ ಸಾಧಿಸಲಿರುವುದು. ಇದರಲ್ಲಿ ವಿಶಿಷ್ಟಾದ್ವೈತಮತದ ಅಂಧಾನುಕರಣವಿದೆಯೆಂದು ಭಾವಿಸುವುದು ಯುಕ್ತವಲ್ಲ. ಅದಕ್ಕೂ ಇದಕ್ಕೂ ಇರುವ ವೈಶಿಷ್ಟ್ಯವನ್ನು ಬೇರೆ ಕಡೆಯಲ್ಲಿ ತಿಳಿಸಿದೆ.

ಈ ಬಗೆಯ ಚಿಂತನೆಯಿಂದ ಸಾಧಕರು ತಮ್ಮ ಹೃದಯವನ್ನು ಕೆಡಿಸಿಕೊಳ್ಳದೆ ಅಲ್ಲಿ ನಿರ್ಲಿಪ್ತನಾಗಿ ನೆಲಸಿರುವ ಶಿವನ ಪರಿಚಯವನ್ನು ಪಡೆದು ಅವನೊಡನೆ ಸೇರಿ ತಮ್ಮ ಶಕ್ತಿಯನ್ನು ವಿಕಾಸಗೊಳಿಸಿಕೊಳ್ಳಲು ಪ್ರಯತ್ನಿಸಬೇಕಾಗಿದೆ. ಇದಕ್ಕೆ ವೀರ ಶೈವರು, ಇತರರು ಎಂಬ ಭೇದಭಾವನೆಗೆ ಅವಕಾಶವೇ ಇಲ್ಲ. ಹೃದಯದೊಳಗಿನ ಜ್ಞಾನರತ್ನದಿಂದ ತಮ್ಮನ್ನು ಅಲಂಕರಿಸಿಕೊಳ್ಳಲು ಯಾರಿಗೆ ಅರ್ಹತೆ ಇಲ್ಲ? ಆ ಜ್ಞಾನಕ್ಕೆ ಹಿರಿದು ಕಿರಿದೆಂಬ ಭೇದವಿಲ್ಲ. ಅದನ್ನು ತಿಳಿದು ಅದರೊಡನೆ ಬೆರೆಯು ವುದೇ ಶಿವಯೋಗ. ಅದರಿಂದಲೇ ನಾವು ಅಮೃತಪುತ್ರರಾಗಲಿರುವೆವು. ಹೀಗೆ ಸಾಧಕ ರೆಲ್ಲರೂ ಅಮೃತಪುತ್ರರಾಗಲೆಂಬುದೇ ಶ್ವೇತಾಶ್ವತರಮಹರ್ಷಿಯ ಆಶಯ. ಇದನ್ನು ಜಾತಿ, ಮತ, ಕುಲ, ಗೊತ್ರ, ಸೂತ್ರಗಳ ಭೇದವಿಲ್ಲದೆ ಎಲ್ಲರೂ ಮನಗಾಣಲೆಂಬುದೇ ಈ ಭಾಷ್ಯದ ಆಶಯವಾಗಿದೆ. ಹೀಗೆ ಮಹರ್ಷಿಯ ಸದಾಶಯವನ್ನು ಈ ಮೂಲಕ ವ್ಯಕ್ತಪಡಿಸಲು ಸಿಕ್ಕಿದ ಸದವಕಾಶವನ್ನು ಸದುಪಯೋಗಪಡಿಸಿಕೊಳ್ಳಲಾಗಿದೆ. ದಿವ್ಯಾ ಮೃತದ ಸವಿಯೂಟಕ್ಕೆ ಎಲೆಯ ಹಂಗಿಲ್ಲ. ಒಲುಮೆಯ ಕೂಟಕ್ಕೆ ಹಾಸಿಗೆಯ ಹಂಗಿಲ್ಲ. ವೀರಶೈವಭಾಷ್ಯವಾದರೂ ಇದು ಆತ್ಮಜ್ಞಾನದ ಬೆಳಕನ್ನು ದೊರಕಿಸು ತ್ತಿರುವುದರಿಂದ ಇದನ್ನು ಎಲ್ಲರೂ ಉಪಯೋಗಿಸಲಿ. ಮಾನವರನ್ನು ಶಿವಾನುಭವಸುಖ ಕ್ಕಾಗಿ ಪ್ರೇರಿಸುವ ಶರಣಗೀತೆಯ ಪದ್ಯದಿಂದ ಈ ಭೂಮಿಕೆಯನ್ನು ಮುಗಿಸಲಾಗಿದೆ.

ಬೀಜೇ ಸ್ಥಿತಂ ವೃಕ್ಷಫಲಂ ಹಿ ಸೂಕ್ಷ್ಮಂ ಕಿಂ ಭೋಕ್ತುಮರ್ಹಂ ಪರಿದೃಶ್ಯತೇಽದ್ಯ ।
ಪಯಃಸ್ಥಿತಂ ಕಿಂ ಘೃತಮಾಶಯಾಪ್ಯತೇ ಇಕ್ಷುಸ್ಥಿತಂ ಕಿಂ ಗುಡಮಾಪ್ಸ್ಯತೇಽಕ್ಷ್ಣಾ ॥
ಸ್ವಸ್ಮಿಂಸ್ಥಿತಂ ಯಜ್ಜಿವತತ್ತ್ವಮೇತತ್ ಸ್ಮೃತಿಕ್ಷಣೇನೈವ ಮತೌ ಸ್ಫುರೇತ್ಕಿಮ್ ।
ವಿಚಿಂತ್ಯ ವಿಜ್ಞಾಯ ಪ್ರಮಥ್ಯ ಭೂಯಃ ಪ್ರಯೋಗತಶ್ಚೈವ ಪ್ರಸಾದ್ಯ ನಿತ್ಯಮ್ ॥
ತತ್ತ್ವಾನುಭಾವೈಕಸುಖೇಽಭಿಷಂಗೋ ನಿಷ್ಣಾತಭಕ್ತಂ ಶರಣಂ ವಿಹಾಯ ।
ಅನ್ಯೈಶ್ಚ ಕಿಂ ಸಾಧಯಿತುಂ ಹಿ ಶಕ್ಯಂ ಗುಹೇಶ್ವರಾಶ್ರಾವಯ ಭೃತ್ಯವಾರ್ತಾಮ್ ॥

ಮಾನಸಗಂಗೋತ್ರಿ,
ಮೈಸೂರುವಿಶ್ವವಿದ್ಯಾನಿಲಯ, ಮೈಸೂರು.

ಟಿ. ಜಿ. ಸಿದ್ಧಾಪ್ಪಾರಾಧ್ಯ,
ಸಜ್ಜನವಿಧೇಯ.

## आत्मनिवेदनम्

पूज्यपितृवर्याणामादेशतः पञ्चवार्षिकं ज्ञानयज्ञमुपक्रम्य तदवधौ लोककल्याणकारकाः कतिपय ग्रन्थाः प्रकाशिता इति महाजना विदन्त्येव। प्रथमं रंभापुरीवीरपीठाध्यक्षवर्याणां जगद्गुरुश्रीवीरगङ्गाधरशिवाचार्यमहास्वामिनामुदाराश्रयेण प्रकटितं शक्तिविशिष्टाद्वैतदर्शनं देशविदेशेषु अनेकेषां साधकानां तदन्तर्वर्तिना चिच्छक्तिविशिष्टेनेश्वरेण अद्वैतं साधयद्विलसति। अनन्तरं श्रीशैलपीठाध्यक्षवर्याणां जगद्गुरुश्रीवागीशपण्डिताराध्यमहास्वामिनामुदारप्रोत्साहेण च प्रकटितः श्रीकरभाष्यानुवादः सन्मान्यैः कर्णाटदेशीयविद्यामन्त्रिवर्यैः श्रीमद्भिः एस् आर कण्ठिमहोदयैरुद्घाटितस्सन् महाजनानां जीवनं पावनयन् श्रीकरयंश्च विराजत इत्यपि सुविदितमेव सर्वेषाम्। वीरशैवधर्मेऽभिजातोऽहं व्यवहारकालेऽपि यथा तं धर्ममाचरेयंस्तथा यथामति प्रयतितव्यमिति पित्रादेशं शिरसा वहन् महास्वामिनां दिव्यप्रसादेन तथैव प्रयतितवान्। चित्तशक्तिविशिष्टस्य मम मद्धृदयस्थस्य चिच्छक्तिविशिष्टस्येश्वरस्य च शक्तिवैशिष्ट्येन सहजतया स्थितो यो भेदस्तं गुर्वनुग्रहादेव क्रमशः परिहृत्य हृदयस्थेश्वरे समरसतया विलीनः श्रीकरभाष्यक्रियासारयोः परिचयेन ज्ञानक्रियासमन्वयात्मिकां दृष्टिं जीवनेऽधिगम्य ज्ञानयज्ञेऽवशिष्टं महत्तरं कार्यं परिसमापयितुं तमेवेश्वरं निरन्तरं चिन्तयत् कतिपयदिवसानत्यवाहयम्॥

भगवद्गीतायाः श्वेताश्वतरोपनिषदश्च वीरशैवदर्शनरीत्या भाष्ये विलेख्ये इति पूज्यपितृवर्यस्य आज्ञा आसीत्किल। तन्निर्वाहाय महागुरुः को वा मेऽवकाशं दद्यादिति मे दैनन्दिनी चिन्ता समजनि। एतच्चिन्तामग्नस्य मे चित्रदुर्गप्रान्ते प्रसाराङ्गभाषणाय गन्तुमवकाश एकदा समुपलब्धः। तदानीं चित्रदुर्गनगरे महेश्वरमहोत्सवः जगद्गुरुश्रीमल्लिकार्जुनमुरुघराजेन्द्रमहास्वामिनां दिव्यसन्निधौ प्रचाल्यमान आसीत्। महेश्वरवंशे जातो महेश्वरप्रियश्चाहं महेश्वरप्रसादा-

कांक्षी महेश्वरमहोत्सवं गत्वा तत्र महाजनसमाजे निर्लिप्ततयाऽवस्थितान् जगद्गुरुमहास्वामिनोऽन्तर्बहिश्चापश्यम् । महास्वामिनोऽपि मां दृष्ट्वा सन्तुष्टान्तरङ्गा निरुपाधिकेन वात्सल्येन मदीयं कुशलमपृच्छन् । पुरा शिवानुभवमण्टपे बसवादिप्रमथैस्समावृतो निरञ्जनपीठमधितिष्ठन् अल्लमप्रभुर्यथा सच्चिदानन्दनित्यपरिपूर्णाविरळपरंज्योतिस्स्वरूप अशोभतेति मम मनसि यथा सुप्रतिष्ठितः आसीत्तथैव पवित्रभावना श्रीपूज्यपादानां दिव्यदर्शनेन मय्युत्पन्ना । महास्वामिनो मामेवमन्वगृह्णन् । "त्वया गुरुपीठे यथा सेवा समर्पिता तथा जङ्गमपीठेऽपि काचन सेवा समर्पणीय" इत्येवमुक्त्वा ते कृपया मामपश्यन् ॥

पूज्यपादानाममृतवाणी मन्मनसि सत्परिणाममुत्पादयामास । तदीयं परमवैराग्यं, हृदयस्थे प्राणलिङ्गे तैरनुभूयमानं सामरस्यं, तथापि लोककल्याणाय तैराचर्यमाणः कर्मयोगः, तादृशमेव शिवपूजानुष्ठानं, निष्पक्षपातेन योग्यतापुरस्करणं, स्वाभाविकमौदार्यं, बहिरन्तश्च विलसन्ती परमा शान्तिरसाधारणीतृप्तिः परमवैराग्यं इत्येवमादिभिस्सर्वैर्गुणैराकृष्टोऽहं मनस्येवमचिन्तयम् 'एकस्य वस्तुनः परिचयाय नेत्रद्वयमुपयुज्यतेऽस्माभिः । नेत्रद्वयेनापि दृश्यमानं वस्त्वेकमेव । तथैव हृद्रयेऽमूर्तं शिवमनुभवितुं गुरुजङ्गमावुभावप्युपयोक्तव्यौ । उभयोरेकभावनयार्चनेन लभ्यं परवस्त्वेकमेव । 'भेददृष्टिर्नरकाय ; अभेददृष्टिर्नित्यसुखाय' इति पूज्यपितृवर्याः सदा वदन्त आसन् । निरञ्जनपीठमधितिष्ठन्नपि निर्लिप्ततया स्थित्वा लोककल्याणं विशेषतः साधयन् जङ्गमोऽपि गुरुरिव समाश्रयणीयः । अस्मिन् पीठेऽपि या काचन सेवा समर्प्यते चेत्तदैव मज्जीवनं फलिष्यति ' इति । तदा जगद्गुरुपादयोर्भक्तिपूर्वकं विज्ञापितं मया " भवतामनुग्रहेणैव विलिखितं श्वेताश्वतरोपनिषद्वीरशैवभाष्यं भवत्पादयोर्भक्त्या समर्प्यत "। इति । एतदाकर्ण्य महास्वामिनस्सन्तुष्टा मामाशीर्भिः पर्यपूरयन् ।

महास्वामिनां पादारविन्दयोरिदं भाष्यं समर्पणीयमिति वचनं मया यद्यपि दत्तमेव । तथापि काचन चिन्ता मम मनसि समजनि । महास्वामिनो यद्यपि न केवलं मे, अपि तु मानववर्गस्यैव निरञ्जनतामहत्त्वं स्वीयाचरणद्वारा

